ಮೈಸೂರು ವಿಶ್ವವಿದ್ಯಾನಿಲಯ

ಸರ್ ಕೆ. ಪಿ. ಪುಟ್ಟಣ್ಣಚೆಟ್ಟರ ಪುದುವಟ್ಟಿನ ಪ್ರಕಟನಮಾಲೆ-೨೭

# ಬುದ್ಧಿಶಕ್ತಿಯ ಅಳತೆ ಮತ್ತು ಉಪಯೋಗ




ಬಿ. ಕೃಷ್ಣನ್, ಎಂ. ಎ.






ಮೈಸೂರು
ಮೈಸೂರು ವಿಶ್ವವಿದ್ಯಾನಿಲಯ
೧೯೩೧

ಮೈಸೂರು ವಿಶ್ವವಿದ್ಯಾನಿಲಯ

ಸರ್ ಕೆ. ಪಿ. ಪುಟ್ಟಣ್ಣಚೆಟ್ಟರ ಪುದುವಟ್ಟಿನ ಪ್ರಕಟನಮಾಲೆ—೨೭

# ಬುದ್ಧಿಶಕ್ತಿಯ ಅಳತೆ ಮತ್ತು ಉಪಯೋಗ

ಬಿ. ಕೃಷ್ಣನ್, ಎಂ.ಎ.






ಮೈಸೂರು

ಮೈಸೂರು ವಿಶ್ವವಿದ್ಯಾನಿಲಯ

೧೯೬೧



# ಮುನ್ನುಡಿ

ದಿವಂಗತ ಸರ್ ಕೆ. ಪಿ. ಪುಟ್ಟಣ್ಣ ಚೆಟ್ಟರು ಉದಾರಬುದ್ಧಿ ಯಿಂದ ನಮ್ಮ ವಿಶ್ವವಿದ್ಯಾನಿಲಯಕ್ಕೆ ಒಂದು ನಿಧಿಯನ್ನು ಒಪ್ಪಿಸಿ, ಆ ಹಣದಿಂದ ಈ ಪುದುವಟ್ಟಿನ ಪ್ರಕಟನಮಾಲೆ ಬೆಳೆಯಲು ಅವಕಾಶವನ್ನು ಕಲ್ಪಿಸಿ, ನಾಡಿಗೆ ಮಹದುಪ ಕಾರವನ್ನು ಮಾಡಿದ್ದಾರೆ. ಅವರು ಪುಣ್ಯಕಾರ್ಯಕ್ಕಾಗಿ ಇತ್ತ ಹಣವನ್ನು ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ಸಮ ರ್ಪಕವಾದ ರೀತಿಯಲ್ಲಿ ಉಪಯೋಗಿಸುತ್ತಿದೆ. ಸೇವಾಮನೋ ಭಾವನೆಯಿಂದ ಪ್ರಕಟಿಸುತ್ತಿರುವ ಈ ಮಾಲೆಯಿಂದ ನಮ್ಮ ಜನರಿಗೆ ಮಹದುಪಕಾರವಾಗುತ್ತಿದೆ. ಇದಕ್ಕಾಗಿ ನಾವು ಸರ್ವದಾ ಸರ್ ಕೆ. ಪಿ. ಪುಟ್ಟಣ್ಣ ಚೆಟ್ಟರನ್ನು ನೆನೆಯಬೇಕಾ ಗಿದೆ.

ವಿಜ್ಞಾನದಲ್ಲಿ ಮುಂದುವರಿದಿರುವ ಪ್ರಪಂಚದ ಇತರ ರಾಷ್ಟ್ರ ಗಳೊಡನೆ ನಾವು ಸಮಸ್ಪರ್ಧಿಗಳಾಗಿ ಬಾಳಬೇಕಾಗಿದೆ. ನಮ್ಮ ಜನರಲ್ಲಿರುವ ಮೂಢ ನಂಬಿಕೆಗಳು ಮಾಯವಾಗಿ ವಿಜ್ಞಾನ ಬುದ್ಧಿ ಬೆಳೆಯಬೇಕಾಗಿದೆ. ಹಳ್ಳಿಗಳ ನಾಡು ನಮ್ಮ ದೇಶ. ನಮ್ಮ ಜನರಿಗೆ ವೈಜ್ಞಾನಿಕ ವಿಷಯಗಳ ಅರಿವು ಮಾಡಿ ಕೊಟ್ಟು, ಅವರಲ್ಲಿರುವ ದುಷ್ಟ ಪದ್ಧತಿಗಳು ದೂರವಾಗುವಂತೆ ಮಾಡುವುದು ತಿಳಿದವರ ಮುಖ್ಯ ಕರ್ತವ್ಯವಾಗಿದೆ. ನಮ್ಮ ಜನರಿಗೆ ಆರೋಗ್ಯ ನಿಯಮಗಳ ವಿಚಾರದಲ್ಲಿ ತಿಳಿವಳಿಕೆ ಸ್ವಲ್ಪ ಮಟ್ಟಿಗಾದರೂ ಇರಬೇಕು. ಸಾಂಕ್ರಾಮಿಕ ರೋಗಗಳಿಗೆ ಕಾರಣ ಮತ್ತು ನಿವಾರಣೋಪಾಯಗಳನ್ನು ನಮ್ಮ ಜನರು ತಿಳಿದಿರಬೇಕು. ವ್ಯವಸಾಯ, ಪಶುಪಾಲನೆ ಮತ್ತು ಕೈಗಾರಿಕೆ

ಮುಂತಾದ ವಿಷಯಗಳಲ್ಲಿ ಆಧುನಿಕ ತಿಳಿವಳಿಕೆ ಅತ್ಯಾವಶ್ಯಕ. ಆಧುನಿಕ ಯಂತ್ರಸಾಮಗ್ರಿಗಳ ತಂತ್ರವನ್ನು ನಮ್ಮವರು ಅರಿಯಬೇಕು. ಇವುಗಳ ಉಪಯೋಗದಿಂದ ನಮ್ಮ ಜನರ ಆರ್ಥಿಕಮಟ್ಟ ಸುಧಾರಣೆಯಾಗಬೇಕು, ಆಚಾರವ್ಯವಹಾರ ಗಳಲ್ಲಿ ಮಾರ್ಪಾಟಾಗಬೇಕು; ನಾಗರಿಕ ಜೀವನದ ಕಡೆ ನಮ್ಮ ಜನರ ಗಮನ ಹರಿಯಬೇಕು.

ವೈಜ್ಞಾನಿಕ ವಿಷಯಗಳನ್ನು ಜನಸಾಮಾನ್ಯರಲ್ಲಿ ಹರಡುವ ಸಲುವಾಗಿ ಸರ್ ಕೆ. ಪಿ. ಪುಟ್ಟಣ್ಣಚೆಟ್ಟರ ಪುದುವಟ್ಟಿನ ಪ್ರಕಟನಮಾಲೆ ಪ್ರಾರಂಭವಾಯಿತು. ಈ ಮಾಲೆಯಲ್ಲಿ ವೈಜ್ಞಾನಿಕ ವಿಷಯಗಳನ್ನೂ ಜನಸಾಮಾನ್ಯರ ನಿತ್ಯಜೀವನಕ್ಕೆ ಅತ್ಯಾವಶ್ಯಕವಾಗಿರುವ ವಿಷಯಗಳನ್ನೂ ಕುರಿತು ಪುಸ್ತಕ ಗಳನ್ನು ಬರೆಯಿಸಿ, ಪ್ರಕಟಿಸಿ, ಅತ್ಯಂತ ಕಡಮೆ ಬೆಲೆಗೆ ಮಾರಲಾಗುತ್ತಿದೆ. ಈ ಮಾಲೆಯಲ್ಲಿ ಈಗಾಗಲೇ ಟಪಾಲ್ ಸಂಸ್ಥೆಯ ವಿವರ, ವಿಶ್ವವಿಸರಣ, ವ್ಯವಸಾಯದ ಮಣ್ಣುಗಳು, ಹೆರಿಗೆ ಮತ್ತು ಶಿಶುಪೋಷಣೆ, ಪಶುಪಾಲನೆ, ಗ್ರಾಮನೈರ್ಮಲ್ಯ, ಪರಮಾಣುಶಕ್ತಿ, ಸಂಸಾರಯೋಜನೆ ಮುಂತಾದ ಗಹನ ವಿಚಾರಗಳನ್ನು ಕುರಿತ ಇಪ್ಪತ್ತೇಳು ಕಿರುಹೊತ್ತಗೆಗಳು ಪ್ರಕಟ ವಾಗಿವೆ. ಈ ಕಿರುಹೊತ್ತಗೆಗಳಲ್ಲಿ ಹೆಚ್ಚು ವಿವರಣೆಗೆ ಅವಕಾಶ ವಿಲ್ಲದಿದ್ದರೂ, ಇವು ಮುಖ್ಯಾಂಶಗಳಲ್ಲಿ ಒಂದನ್ನೂ ಬಿಡದೆ, ವಿಷಯದ ಪೂರ್ಣ ಪರಿಚಯವನ್ನು ಮಾಡಿಕೊಡುತ್ತವೆ. ಜನ ಸಾಮಾನ್ಯರ ನಿತ್ಯ ವ್ಯವಹಾರಕ್ಕೆ ಅತ್ಯಂತ ಆವಶ್ಯಕವಾದ ವಿಷಯವನ್ನು ತಿಳಿಸುವುದರಲ್ಲಿ ಈ ಕಿರುಹೊತ್ತಗೆಗಳು ಬಹಳ ಯಶಸ್ವಿಯಾಗಿವೆ.

ಈ ಕಿರುಹೊತ್ತಗೆಗಳು ತುಂಬ ಜನಪ್ರಿಯವಾಗಿವೆ. ಇವುಗಳಲ್ಲಿ

ಕೆಲವು ಐದು ಅಥವಾ ಆರನೆಯ ಮುದ್ರಣವನ್ನು ಕಂಡಿವೆ. ಅತ್ಯಂತ ಸುಲಭ ಬೆಲೆಯ ಈ ಪುಸ್ತಕಗಳನ್ನು ನಮ್ಮ ಜನರು ಅತ್ಯುತ್ಸಾಹದಿಂದ ಕೊಂಡು ಓದುತ್ತಾರೆ. ಪ್ರಚಾರೋಪನ್ಯಾಸಗಳಿಗೆ ಈ ಪುಸ್ತಕಗಳನ್ನು ಮಾರಲು ತೆಗೆದುಕೊಂಡು ಹೋದಾಗ, ವಸ್ತುಪ್ರದರ್ಶನಗಳಲ್ಲಿ ಈ ಪುಸ್ತಕಗಳನ್ನು ಮಾರಾಟಕ್ಕೆ ಇಟ್ಟಾಗ, ಜನರು ಆದರದಿಂದ ಈ ಪುಸ್ತಕಗಳನ್ನು ಕೊಳ್ಳುವುದು ಈ ಮಾಲೆಯ ಜನಪ್ರಿಯತೆಗೆ ಸಾಕ್ಷಿಯಾಗಿದೆ. ಸುಲಭ ಬೆಲೆ, ಗಹನವಾದ ವಿಷಯ; ಅಗ್ಗದ ಬೆಲೆ, ಅಗ್ಗಳವಾದ ವಿಷಯ ಎಂದು ಜನರು ಹೇಳುವ ಮೆಚ್ಚಿಗೆಯ ಮಾತುಗಳು ಎಲ್ಲ ಕಡೆಗಳಿಂದಲೂ ಕೇಳಿಬರುತ್ತವೆ.

ನಮ್ಮ ವಿಶ್ವವಿದ್ಯಾನಿಲಯದಲ್ಲಿ ಮನಶ್ಶಾಸ್ತ್ರದ ರೀಡರ್ ಆಗಿರುವ ಶ್ರೀ ಬಿ. ಕೃಷ್ಣನ್ ಎಂ.ಎ., ಅವರು ಬರೆದ 'ಬುದ್ಧಿಶಕ್ತಿಯ ಅಳತೆ ಮತ್ತು ಉಪಯೋಗ' ಎಂಬ ಕಿರುಹೊತ್ತಗೆ ಈ ಮಾಲೆಯಲ್ಲಿ ಈಗ ಹೊರಬೀಳುತ್ತಲಿದೆ. ಲೇಖಕರು ಬುದ್ಧಿಶಕ್ತಿ ಪರೀಕ್ಷೆಗಳ ಸಂಕ್ಷಿಪ್ತ ಇತಿಹಾಸವನ್ನು ಈ ಹೊತ್ತಗೆಯಲ್ಲಿ ಚಿತ್ರಿಸಿದ್ದಾರೆ; ಬುದ್ಧಿಶಕ್ತಿಯ ಅಳತೆ ವಿಧಾನಗಳನ್ನೂ ಪ್ರಸಿದ್ಧ ಮನಶ್ಶಾಸ್ತ್ರಜ್ಞರ ಬೇರೆ ಬೇರೆ ಪ್ರಯೋಗಗಳನ್ನೂ ಅಂಕಿ ಅಂಶಗಳೊಡನೆ ವಿವರಿಸಿದ್ದಾರೆ. ಅವರ ಈ ಕಿರುಹೊತ್ತಗೆ ಜನರ ಆದರಕ್ಕೆ ಪಾತ್ರವಾಗಿ, ಹೆಚ್ಚು ಪ್ರಯೋಜನಕಾರಿಯಾಗುತ್ತದೆಯೆಂದು ನಾನು ನಂಬಿದ್ದೇನೆ.

ನಾರಾಯಣರಾವ್ ಅಪ್ಪೂರಾವ್ ನಿಕಂ
ವೈಸ್-ಛಾನ್ಸಲರ್

# ಅರಿಕೆ

ಈ ಪುಸ್ತಕವನ್ನು ಬರೆಯಲು ಬಹಳ ಹಿಂದೆಯೇ ವಿಶ್ವವಿದ್ಯಾನಿಲಯದ ಅಧಿಕಾರಿಗಳಿಂದ ಕರೆ ಬಂದಿತ್ತು. ಶೀಘ್ರವಾಗಿ ಅದನ್ನು ಬರೆದುಕೊಡಲಾಗಲಿಲ್ಲ. ಆ ಕೆಲಸವನ್ನು ಈ ವರ್ಷದ ಬೇಸಿಗೆ ರಜದಲ್ಲಿ ಮಾಡಲು ಸಾಧ್ಯವಾಯಿತು. ಕನ್ನಡದಲ್ಲಿ ಮನಶ್ಶಾಸ್ತ್ರದ ಮೇಲೆ ಹೆಚ್ಚು ಕೆಲಸ ನಡೆದಿಲ್ಲ. ಕನ್ನಡಿಗರಿಗೆ ಮನಶ್ಶಾಸ್ತ್ರದ ಪರಿಚಯ ಮಾಡಿಕೊಡುವ ಹೊಣೆಗಾರಿಕೆ ಕನ್ನಡದಲ್ಲಿ ಪರಿಶ್ರಮವಿರುವ ಮನೋವೈಜ್ಞಾನಿಕರ ಮೇಲೆ ಬಿದ್ದಿದೆ. ಈ ಶತಮಾನದಲ್ಲಿ ಮನಶ್ಶಾಸ್ತ್ರದ ಬೇರೆ ಬೇರೆ ಭಾಗಗಳಲ್ಲಿ ಸಾಕಾದಷ್ಟು ಪರಿಶೋಧನೆಗಳು ನಡೆದಿವೆ. ವಿಜ್ಞಾನ ಬಹಳ ಮುಂದುವರಿದಿದೆ. ಪ್ರಪಂಚದ ನಾನಾ ಭಾಗದ ಜನರು ದೈನಂದಿನ ಜೀವನದಲ್ಲಿ ಮನಶ್ಶಾಸ್ತ್ರದ ಉಪಯೋಗವನ್ನು ಮನಗಂಡಿದ್ದಾರೆ. ಜನಜೀವನದಲ್ಲಿ ಮನಶ್ಶಾಸ್ತ್ರದ ಪರಿಜ್ಞಾನ ಬಹಳ ಉಪಯುಕ್ತವಾದುದೆಂದು ಎಲ್ಲರಿಗೂ ಅರಿವಾಗುತ್ತಿದೆ.

ಈ ಪುಸ್ತಕದಲ್ಲಿ ಸ್ಥೂಲವಾಗಿ ಬುದ್ಧಿಶಕ್ತಿಯ ಅಳತೆ, ಮತ್ತು ಅದರ ಉಪಯೋಗದ ವಿಚಾರವಾಗಿ ಓದುಗರಿಗೆ ಪರಿಚಯ ಮಾಡಿಕೊಡಲಾಗಿದೆ. ಇದನ್ನು ಬರೆಯಲು ಉತ್ತೇಜನ ಕೊಟ್ಟು ಪುಸ್ತಕ ಹೊರಬೀಳಲು ಕಾರಣರಾದ ಮಾನ್ಯಮಿತ್ರ ಶ್ರೀ ದೇ. ಜವರೇಗೌಡರಿಗೆ ನಾನು ಚಿರಋಣಿಯಾಗಿದ್ದೇನೆ. ಕರಡುಪ್ರತಿಯನ್ನು ಓದಿ ಭಾಷೆಯ ತಪ್ಪುಗಳನ್ನು ತಿದ್ದಿ ಉಪಕಾರವನ್ನು ಮಾಡಿದ ಶ್ರೀ ಉ. ಕಾ. ಸುಬ್ಬರಾಯಾಚಾರ್‌ರವರಿಗೆ ನನ್ನ ವಂದನೆಗಳು. ಕರಡುಪ್ರತಿಯನ್ನು

ಮುದ್ದಾಗಿ ಬರೆದು ಅಚ್ಚಿಗೆ ಸಿದ್ಧಪಡಿಸಿದ ಕುಮಾರಿ ರಾಧಿಕೆಗ
ನನ್ನ ಧನ್ಯವಾದಗಳು. ಈ ಪುಸ್ತಕವನ್ನು ಬರೆಯಲು ಕರ
ಕಳುಹಿಸಿ ಪ್ರೋತ್ಸಾಹಿಸಿದುದಕ್ಕಾಗಿ ವಿಶ್ವವಿದ್ಯಾನಿಲಯದ
ಅಧಿಕಾರಿಗಳಿಗೆ ಕೃತಜ್ಞತೆಯನ್ನು ಸೂಚಿಸಲು ಸಂತೋಷ
ಪಡುತ್ತೇನೆ.

ಮೈಸೂರು.
೧೭–೪–೧೯೬೧.

ಬಿ. ಕೃಷ್ಣನ್

## ವಿಷಯಸೂಚಿ

# ಬುದ್ಧಿಶಕ್ತಿಯ ಅಳತೆ ಮತ್ತು ಉಪಯೋಗ

## ಬುದ್ಧಿಶಕ್ತಿ ಎಂದರೇನು?

ಪ್ರಾಚೀನ ಕಾಲದಿಂದಲೂ ಬುದ್ಧಿಶಕ್ತಿ ಅಥವಾ ಮೇಧಾ ಶಕ್ತಿಗೆ ಪ್ರಾಮುಖ್ಯತೆ ಇದೆ. ದೈನಂದಿನ ಜೀವನದಲ್ಲಿ ಬುದ್ಧಿ ಶಕ್ತಿಯ ಪಾತ್ರ ಮಹತ್ತರವಾದದ್ದು. ಜೀವನವನ್ನು ಸುಗಮ ವಾಗಿ ಮುಂದುವರಿಸಿಕೊಂಡು ಹೋಗಲು ಬುದ್ಧಿಶಕ್ತಿ ಆವಶ್ಯಕ. ದೈನಂದಿನ ಜೀವನದಲ್ಲಿ ಎಷ್ಟೋ ತೊಡರುಗಳು, ಜಟಿಲವಾದ ಸಮಸ್ಯೆಗಳು ಮುಂದೆ ಬಂದು ನಿಲ್ಲಬಹುದು. ಇವುಗಳನ್ನು ಸಮಾಜ ಒಪ್ಪುವ ರೀತಿಯಲ್ಲಿ ಎದುರಿಸಿ, ಅವುಗಳಿಂದ ಬಿಡುಗಡೆ ಹೊಂದಿ, ಜೀವನಕ್ಕೆ ಸರಿಹೊಂದುವ ರೀತಿಯಲ್ಲಿ ಮುನ್ನಡೆ ಯಲು ಬುದ್ಧಿಶಕ್ತಿಯು ಅನುಕೂಲವಾಗುತ್ತದೆ. ಹೇಗೆಂದರೆ, ಒಬ್ಬ ಹುಡುಗನು ಪರೀಕ್ಷೆಗೆ ಓದುತ್ತಿರುತ್ತಾನೆ. ಅವನು ಮೇಧಾವಿಯಾಗಿದ್ದ ಪಕ್ಷದಲ್ಲಿ ತನ್ನ ಪಾಠಗಳನ್ನು ಓದಿಕೊಂಡು ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಸಂತಸದಿಂದಿರುತ್ತಾನೆ. ಮತ್ತೊಬ್ಬನು ಹಲವಾರು ಕಾರಣಗಳಿಂದ ಸರಿಯಾಗಿ ಓದದೆ ಪ್ರಶ್ನೆಗಳಿಗೆ ಉತ್ತರಗಳನ್ನು ಸರಿಯಾಗಿ ಬರೆಯದಿರಬಹುದು. ಆದರೆ ಪರೀಕ್ಷಕರನ್ನು ಒಲಿಸಿಕೊಳ್ಳುವುದರ ಮೂಲಕವಾಗಲಿ, ಬೇರಾವ ಮಾರ್ಗದಿಂದಾಗಲಿ ತನ್ನ ಕೆಲಸ ಮಾಡಿಕೊಳ್ಳಲು ಪ್ರಯತ್ನಿಸಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಲು ತನ್ನ ಬುದ್ಧಿಶಕ್ತಿಯನ್ನು ಉಪಯೋಗಿಸಿಕೊಳ್ಳುತ್ತಾನೆ. ಈ ವಿಧ ವಾದ ಬುದ್ಧಿಶಕ್ತಿಯ ಉಪಯೋಗವನ್ನು ನಾವು ಮೆಚ್ಚದೆ ಇರಬಹುದು. ಆದರೆ ತೇರ್ಗಡೆಯಾಗಲು ಬೇರೆ ರೀತಿಯಲ್ಲಿ

ಕೆಲಸಮಾಡಿಕೊಳ್ಳಲು ಬುದ್ಧಿಶಕ್ತಿಯನ್ನು ಉಪಯೋಗಿಸು ವುದನ್ನು ಇಲ್ಲಿ ಕಾಣುತ್ತೇವೆ. ಮಂದಬುದ್ಧಿಯುಳ್ಳವನಿಗೆ ಪರೀಕ್ಷೆಯಲ್ಲಿ ನೇರವಾಗಿ ಉತ್ತೀರ್ಣನಾಗಲು ಸಾಧ್ಯವಿಲ್ಲ; ಮತ್ತು ಚತುರತೆಯಿಂದ ತನ್ನ ಕೆಲಸವನ್ನು ಸಾಧಿಸಿಕೊಳ್ಳಲೂ ಆಗುವುದಿಲ್ಲ. ಇಂಥವನು ತನ್ನನ್ನು ತಾನೇ ತೆಗಳಿಕೊಂಡು ವ್ಯಸನಕ್ಕೀಡಾಗಿ ಮನೋರೋಗಕ್ಕೆ ತುತ್ತಾಗುವ ಸಂಭವ ವುಂಟು.

ಬುದ್ಧಿಶಕ್ತಿಯು ಒಂದು ಸಾಧನ. ಹೇಗೆ ಹಲವಾರು ಸಾಧನಗಳನ್ನು ನಮ್ಮ ಕೆಲಸಗಳಿಗೆ ಉಪಯೋಗಿಸಿಕೊಳ್ಳು ತ್ತೇವೆಯೋ, ಹಾಗೆಯೇ ಬುದ್ಧಿಶಕ್ತಿಯನ್ನು ನಮ್ಮ ಪ್ರಗತಿಗೆ ಉಪಯೋಗಿಸಿಕೊಳ್ಳಬೇಕು. ಆದರೆ ವಿವೇಚನೆಯಿಂದ ಬುದ್ಧಿ ಶಕ್ತಿಯನ್ನೂ ನಮ್ಮ ಅನುಕೂಲಗಳಿಗೆ ಮತ್ತು ಸಮಾಜದ ಹಿತಕ್ಕೆ ಉಪಯೋಗಿಸ ಬೇಕಾಗುತ್ತದೆ. ಕಳ್ಳರು, ಪುಂಡರು, ತುಂಟರು, ಕಾಳಸಂತೆಯವರು ಮೊದಲಾದ ಸಮಾಜದ್ರೋಹಿ ಗಳು ಬುದ್ಧಿಶಕ್ತಿಯನ್ನು ಸ್ವಾರ್ಥಕ್ಕೆ ಉಪಯೋಗಿಸಿಕೊಳ್ಳು ತ್ತಿದ್ದಾರೆ. ಇದು ತುಂಬಾ ಹೀನಾಯವಾದುದು. ಸಮಾಜ ಸೇವಕರೆಂದು ಹೇಳಿಕೊಳ್ಳುವ ಕೆಲವರು ಸಾರ್ವಜನಿಕ ಹಣ ವನ್ನು ತಮ್ಮ ಸ್ವಾರ್ಥಕ್ಕೆ ಉಪಯೋಗಿಸಿಕೊಳ್ಳುತ್ತಿರುವುದು ಎಲ್ಲರಿಗೂ ತಿಳಿದ ವಿಷಯ. ನಡತೆ ಮತ್ತು ಬುದ್ಧಿಶಕ್ತಿಯನ್ನು ಮಾನವನು ಆತ್ಮೋದ್ಧಾರ ಮತ್ತು ಸಮಾಜ ಕಲ್ಯಾಣಕ್ಕಾಗಿ ಉಪಯೋಗಿಸಿದರೆ ಒಳ್ಳೆಯದು.

ಬುದ್ಧಿಶಕ್ತಿಯ ವಿಚಾರವಾಗಿ ಮನೋವೈಜ್ಞಾನಿಕರು ಹಲ ವಾರು ನಿರೂಪಣೆಗಳನ್ನಿತ್ತಿದ್ದಾರೆ. ಅವುಗಳನ್ನು ನಾಲ್ಕು ಬಗೆ ಯಾಗಿ ವಿಂಗಡಿಸಬಹುದು. ಜೀವಶಾಸ್ತ್ರದ ತತ್ತ್ವಕ್ಕೆ ಹೊಂದಿ

ಕೊಳ್ಳುವ ನಿರೂಪಣೆಗಳ ಪ್ರಕಾರ ಜೀವ ಸಂತಾನದಲ್ಲಿ ಮಾನವನು ಎಲ್ಲಾ ವಿಧವಾದ ತೊಡಕುಗಳನ್ನೆದುರಿಸಿ, ಆವರಣಕ್ಕೆ ಹೊಂದಿಕೊಳ್ಳುವುದೇ ಬುದ್ಧಿಶಕ್ತಿಯಾಗಿದೆ. ಜೀವ ಸಂತಾನದಲ್ಲಿ ಮೇಲ್ಮಟ್ಟದ ಪ್ರಾಣಿಗಳು, ಕೀಳ್ಮಟ್ಟದ ಪ್ರಾಣಿಗಳಿಗಿಂತ ಚೆನ್ನಾಗಿ ಆವರಣಕ್ಕೆ ಹೊಂದಿಕೊಳ್ಳುವುದು ಇದಕ್ಕೆ ನಿದರ್ಶನ. ಮೀನು ಕಪ್ಪೆಗಳಿಗಿಂತಲೂ ಮುಂದುವರಿದ ನಾಯಿ ನರಿಗಳು ತಮ್ಮ ಆವರಣಕ್ಕೆ ಹೆಚ್ಚಾಗಿ ಹೊಂದಿಕೊಳ್ಳುತ್ತವೆ. ಅವಕ್ಕಿಂತಲೂ ಕೋತಿ ಮತ್ತು 'ಕಪಿ ಮಾನವ' ಇವುಗಳು ಆವರಣದ ಮೇಲೆ ಹೆಚ್ಚಾದ ಹತೋಟಿಯನ್ನಿಟ್ಟುಕೊಂಡಿರುತ್ತವೆ. ಮನುಷ್ಯನಾದರೋ ಜೀವಸಂತಾನದ ಅತ್ಯುನ್ನತ ಶಿಖರವನ್ನೇರಿದ್ದಾನೆ. ತನ್ನ ಬುದ್ಧಿಶಕ್ತಿಯ ಬಲದಿಂದ ಆವರಣಕ್ಕೆ ಹೆಚ್ಚಾಗಿ ಹೊಂದಿಕೊಳ್ಳಬಲ್ಲನು. ವಿಲಿಯಂ ಸ್ಟೆರ್ನ್, ವೆಲ್ಸ್, ಪೀಟರ್‌ಸ್ನ, ವುಡ್‌ವರ್ತ್ ಮೊದಲಾದ ಮನೋವೈಜ್ಞಾನಿಕರು ಬುದ್ಧಿಶಕ್ತಿಯ ನಿರೂಪಣೆಯನ್ನು ನವೀನ ಸಂದರ್ಭಗಳಿಗೆ ಮಾನವನು ಹೇಗೆ ಹೊಂದಿಕೊಳ್ಳಬಲ್ಲನೆಂಬುದರ ಮೇಲೆ ವಿವರಿಸಿದ್ದಾರೆ.

ಮತ್ತೊಂದು ಗುಂಪಿನವರು ಶಿಕ್ಷಣಕ್ಕೆ ಸಂಬಂಧಿಸಿದಂತೆ ಬುದ್ಧಿಶಕ್ತಿಯ ನಿರೂಪಣೆಯನ್ನು ಕೊಟ್ಟಿದ್ದಾರೆ. ಅವರ ಪ್ರಕಾರ ಬುದ್ಧಿಶಕ್ತಿ ಕಲಿಕೆಯ ಶಕ್ತಿಯ ಮೇಲೆ ನಿಂತಿರುತ್ತದೆ. ಎಲ್ಲಿಯವರೆಗೆ ಒಬ್ಬನು ತನ್ನ ಕಲಿಕೆಯನ್ನು ಮುಂದುವರಿಸಬಲ್ಲನೋ, ಮತ್ತು ಎಷ್ಟರವರೆಗೆ ಒಬ್ಬನು ತನ್ನ ವಿದ್ಯೆಯನ್ನು ಸಂಪಾದಿಸಿರುವನೋ, ಅದು ಅವನ ಬುದ್ಧಿಶಕ್ತಿಯ ಮಟ್ಟವನ್ನು ಸೂಚಿಸುತ್ತದೆ. ಯಾವನಿಗೆ ಕಲಿಕೆಯು ಕಷ್ಟವಾಗಿ ತೋರುತ್ತದೆಯೋ ಮತ್ತು ಕಲಿಕೆಯಲ್ಲಿ ಯಾವನು ಮುಂದುವರಿಯು

ವುದಿಲ್ಲವೋ, ಅಂಥವನು ಬುದ್ಧಿಶಕ್ತಿಯಿಂದ ಕೂಡಿಲ್ಲವೆಂಬುದ ಈ ಗುಂಪಿನವರ ಸಿದ್ಧಾಂತ. ಬಕಿಂಗ್‌ಹ್ಯಾಮ್, ಕಾಲ್ವಿನ ಹೆನ್‌ಮ್ಯಾನ್ ಮೊದಲಾದವರು ಈ ಗುಂಪಿಗೆ ಸೇರಿದ್ದಾ ಇವರಿಗೂ ಮತ್ತು ಪ್ರಾಣಿಶಾಸ್ತ್ರದ ಆಧಾರದಮೇಲೆ ಬು ಶಕ್ತಿಯ ನಿರೂಪಣೆಯನ್ನು ಕೊಡುವವರಿಗೂ ತಮ್ಮ ಅಭಿಪ್ರಾಂ ಗಳಲ್ಲಿ ಹೆಚ್ಚು ವ್ಯತ್ಯಾಸವಿಲ್ಲ. ಕಾರಣ ಎಲ್ಲ ಕಲಿಕೆಯ ನವೀನ ಸಂದರ್ಭಗಳಿಗೆ ಸರಿಯಾಗಿ ಹೊಂದಿಕೊಳ್ಳುವುದ ಆಗಿದೆ.

ಮತ್ತೆ ಕೆಲವರು ಬುದ್ಧಿಶಕ್ತಿಯನ್ನು ಮನಸ್ಸಿನ ಒಂ ವಿಭಾಗ ಅಥವಾ ಗ್ರಹಿಕೆಯ ಒಂದು ಶಕ್ತಿ ಎಂದು ನಿರೂಪಿಸ ತ್ತಾರೆ. ಹಿಂದಿನ ಕಾಲದಲ್ಲಿ ಮನಸ್ಸನ್ನು ಕೆಲವು ಭಾಗಗಳಾ ವಿಂಗಡಿಸಿದರು. ಒಂದೊಂದು ಭಾಗಕ್ಕೂ ಒಂದೊಂ ಹೆಸರನ್ನು ಕೊಟ್ಟಿದ್ದರು. ಉದಾಹರಣೆಗೆ ಜ್ಞಾಪಕಶ ಮನಸ್ಸಿನ ಒಂದು ಭಾಗ; ಸಂವೇದನೆ ಮತ್ತೊಂದು ಭಾಗ ತರ್ಕ ಮತ್ತು ತೀರ್ಮಾನ ಬೇರೊಂದು ಭಾಗ. ಹೀಗೆಯ ಬುದ್ಧಿಶಕ್ತಿ ಮನಸ್ಸಿನ ಒಂದು ಭಾಗ ಎಂದು ಈ ಪಂಗಡದವ ಅಭಿಪ್ರಾಯ. ಇವರ ಪ್ರಕಾರ ಬುದ್ಧಿಶಕ್ತಿ ಏನುಮಾಡಬಲ್ಲುದ ಎನ್ನುವುದಕ್ಕಿಂತ ಬುದ್ಧಿಶಕ್ತಿ ಹೇಗಿದೆ ಎಂಬುದನ್ನು ತಿಳಿಯ ವುದೇ ಉದ್ದೇಶವಾಗಿದೆ. ಬಿನೆ, ಟರ್ಮೆ, ವುಡ್ರೋ, ಹೆಗಾಟ ಮೊದಲಾದ ವೈಜ್ಞಾನಿಕರು ಈ ಗುಂಪಿಗೆ ಸೇರಿದವರು. ಇ ಟರ್ಮೆರವರ ನಿರೂಪಣೆಯನ್ನು ಉದಾಹರಿಸಬಹುದು: 'ಬು ಶಕ್ತಿ ವಿಷಯಗಳನ್ನು ಗ್ರಹಿಸಿಕೊಳ್ಳಬಲ್ಲ ಒಂದು ಗ್ರಹಣಶಕ್ತಿ ಯಾವನೊಬ್ಬನು ಎಷ್ಟರ ಮಟ್ಟಿಗೆ ಭಾವಾರ್ಥಗಳಿಂದ ತನ ಆಲೋಚನೆಗಳನ್ನು ಮುಂದುವರಿಸಬಲ್ಲನೋ ಅಷ್ಟರಮಟ್ಟಿ

ಅವನು ಬುದ್ಧಿವಂತ' ಎಂದು ತಿಳಿಸುತ್ತಾರೆ. ಮಕ್ಕಳಿಗೆ ತಮ್ಮ ಕಲ್ಪನೆಗಳನ್ನು ಮುಂದುವರಿಸಲು ಪದಾರ್ಥಗಳ ಸಹಾಯ ಬೇಕು; ವಯಸ್ಕರಿಗೆ ಅವು ಬೇಕಾಗಿಲ್ಲ. ಸಮಸ್ಯೆಗಳು ಕ್ಲಿಷ್ಟ ವಾಗಿದ್ದರೆ ವಯಸ್ಕರಿಗೂ ಕೂಡ ಪದಾರ್ಥಗಳ ಸಹಾಯ ಬೇಕು; ಮೇಧಾವಿಗಳು ತಮ್ಮ ಮೇಧಾಶಕ್ತಿಯ ಬಲದ ಮೇಲೆ ಪದಾರ್ಥಗಳ ಸಹಾಯವಿಲ್ಲದೆ ಜಟಿಲವಾದ ಪ್ರಶ್ನೆಗಳನ್ನು ಅತಿ ಸುಲಭವಾಗಿ ಬಿಡಿಸಬಲ್ಲರು.

ನಾಲ್ಕನೆಯ ಪಂಗಡದವರು ಬುದ್ಧಿಶಕ್ತಿಯ ಉಪಯೋಗ ಮತ್ತು ಪ್ರಯೋಜನದ ಆಧಾರದ ಮೇಲೆ ಬುದ್ಧಿಶಕ್ತಿಯ ನಿರೂಪಣೆಯನ್ನು ಕೊಡುತ್ತಾರೆ. ಥಾರ್ನ್‌ಡೈಕ್‌ರವರು ಸತ್ಯ ಮತ್ತು ಅಂಶಗಳ ದೃಷ್ಟಿಯಿಂದ ಸರಿಯಾದ ಪ್ರತಿಕ್ರಿಯೆಯನ್ನುಂಟುಮಾಡುವುದೇ ಬುದ್ಧಿಶಕ್ತಿ ಎಂದು ತಿಳಿಸುತ್ತಾರೆ. ಅಮೆರಿಕಾ ದೇಶದ ಹಲವಾರು ಮನೋವೈಜ್ಞಾನಿಕರು ಹೆಚ್ಚು ಕಡಮೆ ಬುದ್ಧಿಶಕ್ತಿಯು ಸಾಧಿಸಬಲ್ಲ ಕೆಲಸಗಳ ಆಧಾರದ ಮೇಲೆ ಬುದ್ಧಿಶಕ್ತಿಯ ನಿರೂಪಣೆಯನ್ನು ಕೊಡುತ್ತಾರೆ.

ಬುದ್ಧಿಶಕ್ತಿಯ ಸರಿಯಾದ ನಿರೂಪಣೆಯನ್ನು ಕೊಡುವುದು ಕಷ್ಟವಾದ ಕೆಲಸವೇ ಸರಿ. ಬೆಲ್ಲಾರ್ಡ್‌ರವರು ಹೇಳುವಂತೆ ಶೈಕ್ಷಣಿಕನು ಬುದ್ಧಿಶಕ್ತಿಯನ್ನು ಪ್ರಚೋದಿಸಲು ಪ್ರಯತ್ನಿಸಿದರೂ, ಮನೋವೈಜ್ಞಾನಿಕನು ಬುದ್ಧಿಶಕ್ತಿಯನ್ನು ಅಳೆಯಲು ಪ್ರಯತ್ನಪಟ್ಟರೂ, ಬುದ್ಧಿಶಕ್ತಿಯ ನೈಜಸ್ಥಿತಿಯು ಇಬ್ಬರಿಗೂ ಗೊತ್ತಿರುವಂತೆ ಕಾಣುವುದಿಲ್ಲ. ಅದಕ್ಕೋಸ್ಕರವೇ ಅಮೆರಿಕಾ ದೇಶದ ಹಲವು ಮನೋವೈಜ್ಞಾನಿಕರು ಇಂದಿಗೂ, 'ಬುದ್ಧಿಶಕ್ತಿಯ ಪರೀಕ್ಷೆಗಳಿಂದ ಯಾವುದನ್ನು ಅಳೆಯಲು ಸಾಧ್ಯವೋ ಅದೇ ಬುದ್ಧಿಶಕ್ತಿ' ಎಂದು ಹೇಳುತ್ತಾರೆ.

ವಿದ್ಯುಚ್ಛಕ್ತಿಯ ನೈಜಸ್ಥಿತಿಯ ವಿಚಾರವಾಗಿ ಭೌತಿಕ ಶಾಸ್ತ್ರಜ್ಞನಿಗೆ ಎಷ್ಟು ತಿಳಿದಿದೆಯೋ ಬುದ್ಧಿಶಕ್ತಿಯ ನಿಜ ಸ್ವರೂಪದ ಬಗ್ಗೆ ಅಷ್ಟೇ ಮನಶ್ಶಾಸ್ತ್ರಜ್ಞನಿಗೆ ಗೊತ್ತಾಗಿದೆ. ಎಂದರೆ ಭೌತಿಕ ಶಾಸ್ತ್ರಜ್ಞನು ವಿದ್ಯುಚ್ಛಕ್ತಿಯ ನಿಜಸ್ವರೂಪ ವನ್ನು ತಿಳಿಯದಿದ್ದರೂ ಅದನ್ನು ಅಳೆಯುವ ವಿಧಾನವನ್ನು ಕಂಡುಹಿಡಿದು ಜನೋಪಯೋಗಕ್ಕೆ ವಿದ್ಯುಚ್ಛಕ್ತಿಯನ್ನು ಉಪ ಯೋಗಿಸುತ್ತಿದ್ದಾನೆ. ಹಾಗೆಯೇ ಮನೋವೈಜ್ಞಾನಿಕನು ಕೂಡ ಬುದ್ಧಿಶಕ್ತಿಯ ನೈಜಸ್ಥಿತಿಯನ್ನು ಅರಿಯದಿದ್ದರೂ ಅದನ್ನು ಅಳೆಯುವ ಸಾಧನಗಳನ್ನು ಕಂಡುಹಿಡಿದು ಜನರ ಬುದ್ಧಿ ಶಕ್ತಿಯ ಮಟ್ಟವನ್ನು ನಿರ್ಧರಿಸಿ ಮುಂದಿನ ಅಧ್ಯಾಯಗಳಲ್ಲಿ ತಿಳಿಸುವಂತೆ ಜನರ ಮತ್ತು ಸಮಾಜದ ಹಿತಕ್ಕೆ ಉಪ ಯೋಗಿಸುತ್ತಾನೆ.

ಈ ಸಂದರ್ಭದಲ್ಲಿ ಲಂಡನ್ ವಿಶ್ವವಿದ್ಯಾನಿಲಯದ ಪ್ರೊಫೆಸರಾಗಿದ್ದ ಸಿ. ಇ. ಸ್ಪಿಯರ್‌ಮನ್‌ರವರು ತಮ್ಮ ಹಲವಾರು ವರ್ಷಗಳ ಪರಿಶೋಧನೆಯ ಫಲವಾಗಿ ಬುದ್ಧಿ ಶಕ್ತಿಯ ವಿಚಾರವಾಗಿ ತಿಳಿಸಿರುವ ವಿಷಯಗಳನ್ನು ಸ್ಥೂಲ ವಾಗಿ ನಾವು ಪರಿಚಯ ಮಾಡಿಕೊಳ್ಳಬಹುದು. ಸ್ಪಿಯರ್‌ಮನ್ ರವರ ಪ್ರಕಾರ ಬುದ್ಧಿ ಶಕ್ತಿಯಲ್ಲಿ ಮೂರು ಶಕ್ತಿಗಳು ಹುದುಗಿರು ತ್ತವೆ. ತಾನು ಅನುಭವಿಸುತ್ತಿರುವ ಅನುಭವಗಳನ್ನು ತಿಳಿದು ಕೊಳ್ಳುವ ಶಕ್ತಿ ಮೊದಲನೆಯದಾಗಿದೆ. ಎರಡು ಅನುಭವಗಳು ಒಬ್ಬನಿಗುಂಟಾದಾಗ ಆ ಎರಡು ಅನುಭವಗಳ ಅಂತರ ಸಂಬಂಧಗಳನ್ನು ಗ್ರಹಿಸುವ ಶಕ್ತಿ ಎರಡನೆಯದಾಗಿದೆ. ಉದಾ ಹರಣೆಗೆ: ಇಬ್ಬರು ಮಕ್ಕಳನ್ನು ಜೊತೆಯಲ್ಲಿ ನೋಡಿದಾಗ ಅವರ ಬಣ್ಣದಲ್ಲಿನ ವ್ಯತ್ಯಾಸವಾಗಲಿ ಅವರ ಆಕಾರ, ಎತ್ತರ, ರೂಪು

ಮೊದಲಾದುವುಗಳಲ್ಲಿ ಯಾವುದಾದರೂ ನಮ್ಮ ಮನಸ್ಸಿಗೆ ಬರಬಹುದು. ಈ ಶಕ್ತಿಗೆ ಸಂಬಂಧ ಗ್ರಹಣ (Education of relations) ವೆಂದು ಹೆಸರು. ಸ್ಪಿಯರ್‌ಮನ್‌ರವರು ಸಂಬಂಧ ಗ್ರಹಣಶಕ್ತಿಗೆ ಮಹತ್ತರವಾದ ಪ್ರಾಮುಖ್ಯತೆ ಕೊಟ್ಟಿದ್ದಾರೆ. ಮನಸ್ಸಿನ ರಾಜ್ಯದಲ್ಲಿ ಆಳುವ ಶಕ್ತಿಯುಳ್ಳದ್ದು ಸಂಬಂಧಗ್ರಹಣ ಶಕ್ತಿ ಎಂದು ಒತ್ತಿ ಹೇಳಿದ್ದಾರೆ. ಸಂಬಂಧಗ್ರಹಣಶಕ್ತಿ ಮತ್ತು ಬುದ್ಧಿಶಕ್ತಿ ಒಂದೇ ಎಂದು ಹಲವು ಸಲ ಹೇಳಿದ್ದಾರೆ. ಬುದ್ಧಿ ವಂತನು ದಡ್ಡನಿಗಿಂತಲೂ ಅಧಿಕವಾಗಿ ಸಂಬಂಧಗ್ರಹಣಶಕ್ತಿ ಯನ್ನು ಹೊಂದಿರುತ್ತಾನೆ. ಮೂರನೆಯದಾಗಿ ಸಂಬಂಧಪಟ್ಟ ಮತ್ತೊಂದು ವಸ್ತುವನ್ನು ಗ್ರಹಿಸುವ ತತ್ತ್ವ (Education of comelates) ವನ್ನು ಪ್ರತಿಪಾದಿಸಿದ್ದಾನೆ. ವಿರುದ್ಧ ಪದ ಗಳನ್ನು ಕೊಡುವ ಪರೀಕ್ಷೆಯಲ್ಲಿ ಈ ತತ್ತ್ವವನ್ನು ಕಾಣ ಬಹುದು. ಬಡವ ಎನ್ನುವ ಪದಕ್ಕೆ ವಿರುದ್ಧ ಪದ ಸಾಹುಕಾರ. ಹೀಗೆಯೇ ಕೆಲವು ಪದಗಳನ್ನು ಕೊಟ್ಟು ಅದರ ವಿರುದ್ಧ ಪದ ಗಳನ್ನು ಕೇಳಿದಾಗ ಸ್ಪಿಯರ್‌ಮನ್‌ರವರ ಮೂರನೆ ತತ್ತ್ವದ ಅನುಸಾರವಾಗಿ ಕೊಟ್ಟ ಪದಕ್ಕೆ ತಿಳಿಸಿದ ಸಂಬಂಧವನ್ನು ಹೊಂದಿಸಿ, ಮತ್ತೊಂದು ಪದವನ್ನು ಕಂಡುಹಿಡಿಯಬೇಕು. ನಮ್ಮ ಅನುಭವದಲ್ಲಿಲ್ಲದ ಕೆಲವು ಪದಗಳನ್ನು ನಾವು ಕಂಡು ಹಿಡಿದಿರುವ ರೀತಿಯೇ ಇಂತಹುದು. ದೇವರು, ಪೂರ್ಣತ್ವ ಮೊದಲಾದುವುಗಳನ್ನು ಉದಾಹರಣೆಯಾಗಿ ಕೊಡಬಹುದು. ಈ ಮೂರು ತತ್ತ್ವಗಳನ್ನು ಪಯೋಗಿಸಿಯೇ (ಹೆಚ್ಚಾಗಿ ಎರಡು ಮತ್ತು ಮೂರನೇ ತತ್ತ್ವವನ್ನು ಪಯೋಗಿಸಿ) ಸ್ಪಿಯರ್‌ಮನ್ ರವರು ಬುದ್ಧಿಶಕ್ತಿಯ ಪರೀಕ್ಷೆಗಳನ್ನು ರಚಿಸಿದ್ದಾರೆ. ಅವರಲ್ಲದೆ ಇತರ ಮನೋವೈಜ್ಞಾನಿಕರು ರಚಿಸಿದ ಪರೀಕ್ಷೆಗಳಲ್ಲೂ ಮೇಲೆ ತಿಳಿಸಿದ ತತ್ತ್ವಗಳನ್ನು ಕಾಣಬಹುದು.

ಸ್ಪಿಯರ್‌ಮನ್‌ರವರ ಮುಖ್ಯವಾದ ಸಿದ್ಧಾಂತ, ಇದಕ್ಕೆ ಎರಡು ತತ್ತ್ವಗಳನ್ನೊಳಗೊಂಡ ಬುದ್ಧಿಶಕ್ತಿಯ ನಿರೂಪಣೆ; (two–factor theory of Intelegence) ಎಂದು ಹೆಸರು. ನಮ್ಮಲ್ಲಿ ಎರಡು ವಿಧವಾದ ಶಕ್ತಿಗಳಿವೆ. ಒಂದಕ್ಕೆ ಸಾಮಾನ್ಯಶಕ್ತಿ (General ability) ಅಥವಾ 'ಜಿ' ಫ್ಯಾಕ್ಟರ್ ('g' factor) ಎಂದು ಹೆಸರು. ನಾವು ಮಾಡುವ ಎಲ್ಲಾ ಕೆಲಸಗಳಲ್ಲಿಯೂ ಈ ಸಾಮಾನ್ಯ ಶಕ್ತಿಯ ಪ್ರವೇಶವನ್ನು ಕಾಣಬಹುದು. ಮತ್ತೊಂದು ವಿಶೇಷ ಶಕ್ತಿ (Specific ability) ಎಂದು ಹೇಳ ಬಹುದು. ನಮ್ಮಲ್ಲಿ ಅನೇಕ ವಿಧವಾದ ವಿಶೇಷ ಶಕ್ತಿಗಳು ಹುದುಗಿರುತ್ತವೆ. ಸಾಮಾನ್ಯ ಶಕ್ತಿಯು ಎಷ್ಟರಮಟ್ಟಿಗೆ ವಿಶೇಷ ಶಕ್ತಿಗಳಲ್ಲಿ ಕಾಣಿಸಿ ಕೊಳ್ಳುವದೋ ಅಷ್ಟರಮಟ್ಟಿಗೆ ವಿಶೇಷ ಶಕ್ತಿಗಳು ಪ್ರಕಾಶ ಮಾನಗೊಳ್ಳುತ್ತವೆ. ಕವಿತಾಶಕ್ತಿ, ಸಂಗೀತ, ಶಿಲ್ಪಕಲೆ, ಗಣಿತ ಮೊದಲಾದುವು ವಿಶೇಷ ಶಕ್ತಿಗಳು. ಇವು ಪ್ರಕಾಶಗೊಳ್ಳಬೇಕಾದರೆ ಸಾಮಾನ್ಯ ಶಕ್ತಿಯ ಸಂಯೋಜನೆಯಿಂದ ಒಂದು ಉಪಮೆಯನ್ನು ಕೊಡಬಹುದು. ಎಲ್ಲ ವಿಶೇಷ ಶಕ್ತಿಗಳು ಹಬೆಯ ಯಂತ್ರಗಳಂತೆ ಇರುತ್ತವೆ. ಹಬೆಯು ಪ್ರವೇಶಿಸಿದಂತೆ, ಯಂತ್ರಶಕ್ತಿ ಹೆಚ್ಚುತ್ತದೆ. ಹಬೆ ಬಹಳ ಕಡಿಮೆಯಾದರೆ ಯಂತ್ರ ಚಲನೆಯಾಗದೆ ನಿಲ್ಲಬಹುದು.

ಜೀವನದಲ್ಲಿ ಪ್ರತಿಭಾವಂತರನ್ನು ನಾವು ಕಾಣುತ್ತಿದ್ದೇವೆ. ಕೆಲವರು ಹೆಸರಾಂತ ಕವಿಗಳು, ಮತ್ತೆ ಕೆಲವರು ಪ್ರಸಿದ್ಧ ಸಂಗೀತಗಾರರು, ಇನ್ನು ಕೆಲವರು ಮೇಧಾವಿಗಳಾದ ವೈಜ್ಞಾನಿಕರು. ಹೀಗೆ ಒಂದೊಂದು ಕಲೆಯಲ್ಲಿಯೂ, ಒಂದೊಂದು ವೃತ್ತಿಯಲ್ಲಿಯೂ ಹೆಸರು ಪಡೆದವರಿದ್ದಾರೆ. ಒಬ್ಬೊಬ್ಬರು ಒಂದೊಂದು ವಿಧವಾದ ಶಕ್ತಿಯಲ್ಲಿ ಪ್ರಾವೀಣ್ಯತೆಯನ್ನು

ಹೊಂದಿರುತ್ತಾರೆ. ಇತರ ಶಕ್ತಿಗಳಲ್ಲಿ ಹಿಂದುಳಿದಿರುತ್ತಾರೆ. ಸ್ಪಿಯರ್‌ಮನ್‌ರವರ ಸಿದ್ಧಾಂತದ ಮೂಲಕ ಇಂತಹ ಶಾರ ತಮ್ಯಗಳನ್ನು ನಾವು ಸುಲಭವಾಗಿ ತಿಳಿಯಬಹುದು.

ಸ್ಪಿಯರ್‌ಮನ್‌ರವರ ಸಿದ್ಧಾಂತ ನಿರ್ವಿವಾದವೆಂದು ಹೇಳಲು ಸಾಧ್ಯವಿಲ್ಲ. ಗಾಡ್‌ಫ್ರೋ ಥಾಂಪ್ಸನ್ ಮತ್ತು ಥಾರ್ನ್‌ಡೈಕ್ ಮೊದಲಾದ ಮನೋವೈಜ್ಞಾನಿಕರು ಸ್ಪಿಯರ್‌ಮನ್‌ರವರ 'ದ್ವಿತತ್ತ್ವ' (Two factor theory) ಸಿದ್ಧಾಂತವನ್ನು ತಮ್ಮ ಪರಿಶೋಧನೆಗಳ ಆಧಾರದ ಮೇಲೆ ವಿಮರ್ಶಿಸಿ ಬೇರೆ ಬೇರೆಯಾದ ತತ್ತ್ವಗಳನ್ನು ಪ್ರತಿಪಾದಿಸಿದ್ದಾರೆ. ಕುತೂಹಲವುಳ್ಳವರು ಅವರು ಬರೆದ ಪುಸ್ತಕಗಳನ್ನು ಓದಿ ಅವರ ತತ್ತ್ವಗಳ ಪರಿಚಯ ವನ್ನು ಪಡೆಯಬಹುದು.

ಒಟ್ಟಿನಲ್ಲಿ ಬುದ್ಧಿಶಕ್ತಿ ಎಂದರೇನು? ಎಂಬ ಪ್ರಶ್ನೆಗೆ ಅನೇಕ ಮನೋವೈಜ್ಞಾನಿಕರು ಬುದ್ಧಿಶಕ್ತಿ ನಿರೂಪಣೆಗಳನ್ನು ಮತ್ತು ಹಲವಾರು ಬುದ್ಧಿಶಕ್ತಿ ಪರೀಕ್ಷೆಗಳನ್ನು ಗಮನಿಸಿ ಒಂದು ನಿರ್ಧಾರಕ್ಕೆ ಬರಬಹುದು. ಕೊಟ್ಟ ಒಂದು ಕೆಲಸವನ್ನು–ಅದು ಸಮಸ್ಯೆಯಾಗಲಿ ಅಥವಾ ಕಾರ್ಯವಾಗಲಿ, ಶೀಘ್ರವಾಗಿ ಸಮರ್ಪಕವಾಗಿ ತಪ್ಪಿಲ್ಲದೆ ಮಧ್ಯೆ ಬಿಟ್ಟುಬಿಡದೇ ಮಾಡುವುದು ಬುದ್ಧಿಶಕ್ತಿಯ ಕೆಲವು ಲಕ್ಷಣಗಳು. ಉದಾಹರಣೆಗೆ: ರಾಮು ಮತ್ತು ಕೃಷ್ಣ ಎಂಬ ಇಬ್ಬರು ಹುಡುಗರು ಒಂದು ಪ್ರಶ್ನೆ ಪತ್ರಿಕೆಗೆ ಉತ್ತರ ಬರೆಯುತ್ತಾರೆ. ರಾಮುನು ೪೦ ನಿಮಿಷಗಳ ಲ್ಲಿಯೂ, ಕೃಷ್ಣನು ೬೦ ನಿಮಿಷಗಳಲ್ಲಿಯೂ ಸರಿಯಾದ ಉತ್ತರ ಗಳನ್ನು ಬರೆಯುತ್ತಾರೆ. ಕಾಲದ ಆಧಾರದ ಮೇಲೆ ರಾಮುನು ಕೃಷ್ಣನಿಗಿಂತಲೂ ಬುದ್ಧಿವಂತನೆಂಬುದು ಸ್ವಯಂವಿದಿತ ವಾಗಿದೆ. ಬುದ್ಧಿಶಕ್ತಿಯುಳ್ಳವರು ಸಂಬಂಧಗ್ರಹಣ ಶಕ್ತಿಯಿಂದ

ಸರಿಯಾದ ಸಂಬಂಧಗಳನ್ನು ಗ್ರಹಿಸಿ ನೇರವಾಗಿ ಸಮಸ್ಯೆ
ಗಳನ್ನು ಬಿಡಿಸಲು ತೊಡಗುತ್ತಾರೆ. ಒಂದುವೇಳೆ ಸನ್ನಿವೇಶ
ವೊಂದರಲ್ಲಿ ತಮಗೆ ಹೊಳೆದ ರೀತಿಯೊಂದು ಸರಿಹೋಗದಿದ್ದರೆ
ಮತ್ತೆ ಮತ್ತೆ ಅನೇಕ ರೀತಿಯ ಊಹೆಗಳನ್ನು (hypotheses)
ಕಲ್ಪಿಸಿಕೊಂಡು ತಮ್ಮ ಮುಂದಿರುವ ಸಮಸ್ಯೆಗಳನ್ನು ಸಮರ್ಪಕ
ವಾಗಿ ಬಿಡಿಸುತ್ತಾರೆ. ಜೊತೆಗೆ ಮಂದಬುದ್ಧಿಯುವರಂತೆ ಕಷ್ಟ
ತೋರಿದಾಗ ಕಾರ್ಯ ವಿಮುಖರಾಗುವುದಿಲ್ಲ. ಹಿಡಿದ ಕೆಲಸವನ್ನು
ಸಾಧಿಸುತ್ತಾರೆ.

## ಬುದ್ಧಿಶಕ್ತಿ ಪರೀಕ್ಷೆಗಳ ಸಂಕ್ಷಿಪ್ತ ಇತಿಹಾಸ

ಬುದ್ಧಿಶಕ್ತಿಯ ಪರೀಕ್ಷೆಗಳನ್ನು ಬಹಳ ಹಿಂದಿನ ಕಾಲದಿಂದಲೂ
ಜನರು ಉಪಯೋಗಿಸುತ್ತಿದ್ದಾರೆ. ಬೆಲ್ಲಾರ್ಡ್‌ರವರು ತಿಳಿಸು
ವಂತೆ ಚೈನಾದೇಶದಲ್ಲಿ ನಾಲ್ಕು ಸಾವಿರ ವರ್ಷಗಳ ಹಿಂದೆ ಬುದ್ಧಿ
ವಂತರಾದ ಜನರನ್ನು ಆರಿಸಲು ಸ್ಪರ್ಧಾ ಪರೀಕ್ಷೆಗಳು ನಡೆಯು
ತ್ತಿದ್ದುವು. ಶಾಲೆಯ ಪರೀಕ್ಷೆಗಳು ಶಾಲೆಗಳು ಪ್ರಾರಂಭವಾದಾಗ
ಲಿಂದಲೂ ಯಾವುದಾದರೊಂದು ವಿಧದಲ್ಲಿ ನಡೆಯುತ್ತಿವೆ.
ಬೃಹದಾರಣ್ಯಕೋಪನಿಷತ್ತಿನಲ್ಲಿ ಜನಕ ರಾಜನು ಏರ್ಪಡಿಸಿದ್ದ
ಬ್ರಹ್ಮನನ್ನು ಕುರಿತ ಚರ್ಚೆ ಒಂದು ವಿಧವಾದ ಪಾಂಡಿತ್ಯದ
ಮತ್ತು ಬ್ರಹ್ಮಜ್ಞಾನಾರ್ಜನೆಯ ಪರೀಕ್ಷೆ. ಪಂಪ ಕಂತಿಯರ
ಸಮಸ್ಯೆಗಳು, ಕಾಳಿದಾಸ ಮತ್ತು ತೆನ್ನಾಲಿರಾಮಕೃಷ್ಣರ
ಹೆಸರಿನಲ್ಲಿ ಪ್ರಚಾರವಾಗಿರುವ ಸಮಸ್ಯೆಗಳನ್ನು ಬಿಡಿಸುವ ರೀತಿ,
ಗಣಿತದಿಂದ ಕೂಡಿದ ಪ್ರಶ್ನೆಗಳಿಗೆ ಉತ್ತರಗಳನ್ನು ಕೊಡುವುದು,
(ಭಾಸ್ಕರಾಚಾರ್ಯರ ಲೀಲಾವತಿ ಗ್ರಂಥದಿಂದ ಅನೇಕ
ಉದಾಹರಣೆಗಳನ್ನು ಕೊಡಬಹುದು)—ಇವೇ ಮೊದಲಾದವು

ಗಳಿಂದ ಹಿಂದೂ ಸಂಸ್ಕೃತಿಯಲ್ಲಿ ಪ್ರಾಚೀನ ಕಾಲದಿಂದಲೂ ಬುದ್ಧಿಶಕ್ತಿಯ ಪರೀಕ್ಷೆಗಳಿಗೆ ಒಂದು ಹಿರಿಯ ಸ್ಥಾನವನ್ನು ಕೊಟ್ಟಿದ್ದರೆಂದು ವ್ಯಕ್ತಪಡುತ್ತದೆ. ಬೇರೆ ಸಂಸ್ಕೃತಿಗಳಲ್ಲಿಯೂ ಬುದ್ಧಿಶಕ್ತಿಯ ಪರೀಕ್ಷೆಗಳನ್ನು ನಾವು ಕಾಣಬಹುದು. ಪ್ರಸಿದ್ಧವಾದ ಸ್ಫಿನ್ಕ್ಸ್ (Sphinx) ಒಗಟು ಇದಕ್ಕೆ ನಿದರ್ಶನವಾಗಿದೆ. ಹಿಂದಿನವರು ಬುದ್ಧಿಶಕ್ತಿಯ ಪರೀಕ್ಷೆಗಳಿಗೆ ಗಮನಕೊಟ್ಟರೆ ಹೊರತು, ಅದನ್ನು ಅಳೆದು ಅದರ ಪ್ರಮಾಣ ಗೊತ್ತುಮಾಡಿ, ಅದನ್ನು ಆಧುನಿಕ ರೀತಿಯಲ್ಲಿ ಜನರ ಹಿತಕ್ಕೆ ಉಪಯೋಗಿಸುವಂತೆ ಮಾಡಲಿಲ್ಲ.

ಈ ದೃಷ್ಟಿಯಿಂದ ಬುದ್ಧಿಶಕ್ತಿಯನ್ನು ಅಳೆಯಲು ಪ್ರಾರಂಭವಾದದ್ದು ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ. ಹತ್ತೊಂಬತ್ತನೆ ಶತಮಾನದ ಅಂತ್ಯಭಾಗದಲ್ಲಿ ಕೆಲವರು ಮನೋವೈಜ್ಞಾನಿಕರು ಮನಸ್ಸಿನ ಪರೀಕ್ಷೆಗಳಿಗೆಗಮನಕೊಟ್ಟು ಹಲವಾರು ಪ್ರಯತ್ನಗಳನ್ನು ಮಾಡಿದ್ದರೂ, ಫಲಪ್ರದವಾದ ಕೆಲಸ ನಡೆದದ್ದು ಈ ಶತಮಾನದಲ್ಲಿಯೇ. ಫ್ರಾನ್ಸ್‌ದೇಶದ ಪ್ಯಾರಿಸ್ ನಗರದ ಶಿಕ್ಷಣ ಇಲಾಖೆಯವರು ೧೯೦೪ನೆಯ ಇಸವಿಯಲ್ಲಿ ಮಂದಬುದ್ಧಿಯ ಮಕ್ಕಳ ವಿದ್ಯಾಭ್ಯಾಸದ ವಿಚಾರವಾಗಿ ಆಲೋಚಿಸಲು ಒಂದು ಸಂಸ್ಥೆಯನ್ನು ಏರ್ಪಡಿಸಿದರು. ಆ ಸಂಸ್ಥೆಯವರು ಮಂದಬುದ್ಧಿಯವರಾದ ಮಕ್ಕಳಿಗೋಸ್ಕರ ಬೇರೆ ಪಾಠಶಾಲೆಗಳನ್ನು ತೆಗೆದು ಅಲ್ಲಿ ವಿಶೇಷ ರೀತಿಯಿಂದ ಅವರಿಗೆ ವಿದ್ಯಾಭ್ಯಾಸ ಮಾಡಿಸಬೇಕೆಂದು ತೀರ್ಮಾನಿಸಿದರು. ಆದರೆ ಅಂತಹವರನ್ನು ಕಂಡುಹಿಡಿಯುವ ಸಮಸ್ಯೆ ಅವರ ಮುಂದೆ ನಿಂತಿತು. ಇದನ್ನು ಪರಿಹರಿಸಲು ಆಲ್ಫ್ರೆಡ್ ಬೀನೆ ಎಂಬ ಮನೋವೈಜ್ಞಾನಿಕನೊಡನೆ ಯೋಚಿಸಿದರು. ಈ

ಸಂದರ್ಭದಲ್ಲಿ ಬೀನೆ ಮತ್ತು ಅವರ ಜೊತೆ ಕೆಲಸಗಾರರಾದ ಸೈಮನ್‌ರವರು ಒಂದು ಬುದ್ಧಿಶಕ್ತಿಯ ಪರೀಕ್ಷೆಯ ಯೋಜನೆಯನ್ನು ತಯಾರುಮಾಡಲು ಪ್ರಾರಂಭಿಸಿದರು. ಇದಕ್ಕೆ ಹಿಂದೆ ಬೀನೆ ಅವರು ಮನಶ್ಶಾಸ್ತ್ರದಲ್ಲಿ ಅನೇಕ ಪ್ರಯೋಗಗಳನ್ನು ಮಾಡಿದ್ದರು. ಅವುಗಳ ಆಧಾರದ ಮೇಲೆ ಬುದ್ಧಿಶಕ್ತಿಯ ವಿಚಾರವಾಗಿ ಒಂದು ತೀರ್ಮಾನಕ್ಕೆ ಬಂದರು. ವೇದನೆ, ಸಂವೇದನೆ, ಪ್ರತಿಕ್ರಿಯೆಯಕಾಲ ಇವುಗಳನ್ನು ಅಳೆಯುವುದರಿಂದ ಬುದ್ಧಿಶಕ್ತಿಯನ್ನೂ ಅಳೆದಹಾಗೆ ಆಗುವುದಿಲ್ಲ. ಇವುಗಳಿಂದ ಜನರನ್ನು ವಿಂಗಡಿಸಲು ಸಾಧ್ಯ. ಅವರ ಬುದ್ಧಿಶಕ್ತಿಯನ್ನು ಕಂಡುಹಿಡಿಯಬೇಕಾದರೆ ಗ್ರಹಣಶಕ್ತಿ, ಮೀಮಾಂಸೆ, ತೀರ್ಪನ್ನು ಕೊಡುವುದು ಇಂತಹ ಗಹನವಾದ ಮನೋವೃತ್ತಿಗಳನ್ನು ಗಮನಕ್ಕೆ ತೆಗೆದುಕೊಳ್ಳಬೇಕು. ಅವುಗಳನ್ನು ಅಳೆಯುವುದರ ಮೂಲಕ ಒಬ್ಬನ ಬುದ್ಧಿಶಕ್ತಿಯನ್ನು ಗೊತ್ತುಪಡಿಸಬಹುದು. ಇದೇ ತರ್ಕವನ್ನು ಮುಂದುವರಿಸಿ ತಮ್ಮ ಮೊದಲನೆಯ ಬುದ್ಧಿಶಕ್ತಿ ಪರೀಕ್ಷೆಯನ್ನು ೧೯೦೫ ನೆಯ ಇಸವಿಯಲ್ಲಿ ಪ್ರಚುರಪಡಿಸಿದರು. ಈ ಪರೀಕ್ಷೆಯು ಸಮರ್ಪಕವಾಗಿ ಕಂಡುಬರಲಿಲ್ಲವಾದ್ದರಿಂದ ಇದನ್ನು ಮಾರ್ಪಡಿಸಿದ ಪರೀಕ್ಷೆಯು ೧೯೦೮ ರಲ್ಲಿ ಹೊರಬಿದ್ದಿತು. ಈ ಪರೀಕ್ಷೆಯೂ ಕೂಡ ಸಮರ್ಪಕವಾಗಿಲ್ಲದಿದ್ದರೂ, ಬುದ್ಧಿಶಕ್ತಿಯನ್ನು ಅಳೆಯುವ ಪರೀಕ್ಷೆಗಳ ದೃಷ್ಟಿಯಿಂದ, ಇದಕ್ಕೆ ಮಹತ್ತರವಾದ ಸ್ಥಾನ ಕೊಡಲಾಗಿದೆ. ಮೊದಲನೆಯಬಾರಿಗೆ ಬೀನೆ ಅವರು ಬುದ್ಧಿಶಕ್ತಿಯನ್ನು ಅಳೆಯುವ ಸಂಬಂಧದಲ್ಲಿ ದೈಹಿಕ ವಯಸ್ಸನ್ನು (Chronological age) ಗಣನೆಗೆ ತೆಗೆದುಕೊಂಡರು. ಇದರಿಂದ ಬುದ್ಧಿಶಕ್ತಿಯ ಪರಿಶೋಧನೆಗಳಿಗೆ, ಒಳ್ಳೆಯ ತಳಹದಿಯನ್ನು ಹಾಕಿ

ದರು. ಇದರ ಸಹಾಯದಿಂದ ಮಾನಸಿಕ ವಯಸ್ಸನ್ನು ಕಂಡು ಹಿಡಿಯಲು ಸಾಧ್ಯವಾಯಿತು. ಬುದ್ಧಿಶಕ್ತಿಯ ಪ್ರಮಾಣವನ್ನು ಕಂಡುಹಿಡಿಯಲು ದೈಹಿಕ ವಯಸ್ಸು ಮತ್ತು ಮಾನಸಿಕ ವಯಸ್ಸು ಬೇಕಾಗುತ್ತದೆ. ೧೯೦೮ ರಲ್ಲಿ ಪ್ರಚುರಪಡಿಸಿದ ಪರೀಕ್ಷೆಯಲ್ಲಿ ಕೆಲವು ನ್ಯೂನತೆಗಳು ಕಂಡುಬಂದುದರಿಂದ ಅದನ್ನು ಮತ್ತೆ ಮಾರ್ಪಡಿಸಿ ೧೯೧೧ ರಲ್ಲಿ ಮತ್ತೊಂದು ಹೊಸ ಪರೀಕ್ಷೆಯನ್ನು ರಚಿಸಿದರು. ಇದನ್ನು ಹೊರಪಡಿಸಿದ ಸ್ವಲ್ಪ ಕಾಲದಲ್ಲಿಯೇ ಬೀನೆ ಅವರು ತೀರಿಕೊಂಡರು. ಆದರೆ ಅವರು ಪ್ರಾರಂಭಿಸಿದ ಕೆಲಸ ಮತ್ತಷ್ಟು ಪರಿಶೋಧಕರ ಕಾರ್ಯವನ್ನು ಪ್ರಚೋದಿಸಿತು. ಬೀನೆ ಅವರು ಬುದ್ಧಿಶಕ್ತಿ ಪರೀಕ್ಷೆಗಳ ಮೂಲ ಪುರುಷರೆಂದರೆ ತಪ್ಪಾಗಲಾರದು. ಅವರು ರಚಿಸಿದ ಬುದ್ಧಿ ಶಕ್ತಿಯ ಪರೀಕ್ಷೆಯನ್ನು ವಿದೇಶಗಳಲ್ಲಿ ಉಪಯೋಗಿಸಲು ಮನೋವೈಜ್ಞಾನಿಕರು ಪ್ರಾರಂಭಿಸಿದರು. ಅಮೆರಿಕಾ ದೇಶದಲ್ಲಿ ಈ ಪರೀಕ್ಷೆಯನ್ನು ಹೆಚ್ಚಾಗಿ ಉಪಯೋಗಿಸಲಾ ಯಿತು. ಗಾಡ್ಡರ್ಡ್ ಎಂಬುವರು ಮೊಟ್ಟಮೊದಲು ಬೀನೆಯವರ ಬುದ್ಧಿಶಕ್ತಿ ಪರೀಕ್ಷೆಯನ್ನು ಮಾರ್ಪಡಿಸಿ, ಅಮೆರಿಕಾ ದೇಶದ ಬಳಕೆಗೆ ಅಳವಡಿಸಿಕೊಂಡು ತೀಕ್ಷ್ಣಬುದ್ಧಿಯ ಮತ್ತು ಮಂದ ಬುದ್ಧಿಯ ಹುಡುಗರ ಬುದ್ಧಿಶಕ್ತಿಯ ಮಟ್ಟವನ್ನು ತಿಳಿಯಲು ವೈನ್‌ಲ್ಯಾಂಡ್ ಪಟ್ಟಣದಲ್ಲಿ ಉಪಯೋಗಿಸಿದರು. ಮಂದ ಬುದ್ಧಿಯ ಹುಡುಗರಿಗಾಗಿ ಏರ್ಪಡಿಸಿದ ಸಂಸ್ಥೆಯಲ್ಲಿರುವ ಮಕ್ಕಳ ಬುದ್ಧಿಶಕ್ತಿಯ ಮಟ್ಟವನ್ನು ತಿಳಿಯುವ ಉದ್ದೇಶದಿಂದ ಬೀನೆಯವರ ಪರೀಕ್ಷೆಯನ್ನು ಮಾರ್ಪಡಿಸಿಕೊಂಡರೂ ಅದೇ ಪರೀಕ್ಷೆಯನ್ನು ಅಲ್ಲಿಯ ಶಾಲೆಗಳಲ್ಲಿ ಓದುತ್ತಿರುವ ಎರಡು ಸಾವಿರ ವಿದ್ಯಾರ್ಥಿಗಳಿಗೆ ಕೊಡಲಾಯಿತು. ಅದರ ಫಲಿತಾಂಶ

ವಾಗಿ ಅನೇಕ ಜನ ಮಂದಬುದ್ಧಿಯುಳ್ಳ ಹುಡುಗರು ಶಾ ಗಳಲ್ಲಿ ತುಂಬಿರುವುದು ತಿಳಿಯಿತು. ಜೊತೆಗೆ ಬೀನೆಯವ ಪರೀಕ್ಷೆಯು ಮಂದಬುದ್ಧಿಯ ಹುಡುಗರನ್ನು ಬುದ್ಧಿವಂ ಹುಡುಗರಿಂದ ಬೇರ್ಪಡಿಸುವ ಒಳ್ಳೆ ಸಾಧನವಾಗಿ ಕಂಡ ಬಂದಿತು.

೧೯೧೧ ರಲ್ಲೆ ಗಾಡ್ಡರ್ಡ್‌ರವರು ಬೀನೆಯವರ ಪರೀಕ್ಷೆಯನ್ ಮಾರ್ಪಡಿಸಿ ಪ್ರಚುರಪಡಿಸಿದರು. ಪ್ರಚುರವಾದ ಸ್ವ ದಿನಗಳಲ್ಲಿಯೇ ಕ್ಯೂಲ್‌ಮನ್‌ರವರು ತಮ್ಮ ಪ್ರದೇಶದ ಮಕ್ಕ ಬುದ್ಧಿಶಕ್ತಿಯನ್ನು ಅಳೆಯಲು ಬೀನೆಯವರ ಪರೀಕ್ಷೆಯನ್ ಅಳವಡಿಸಿಕೊಂಡರು. ಆ ಪರೀಕ್ಷೆಯನ್ನು ಅಮೆರಿಕಾ ದೇಶ ಮಕ್ಕಳಿಗೆ ಅಳವಡಿಸಿಕೊಂಡ ಹಲವು ಪ್ರಯತ್ನಗಳಲ್ಲಿ ಬಹ ಮುಖ್ಯವಾದುದೆಂದರೆ ಸ್ಟ್ಯಾನ್‌ಫೋರ್ಡ್ ವಿಶ್ವವಿದ್ಯಾನಿಲಯದ ಟರ್ಮನ್‌ರವರು ನಡೆಸಿದ ಪರಿಶೋಧನೆ ಕಾರ್ಯಗಳು. ೧೯೧೬ ರ ಟರ್ಮನ್‌ರವರು ತಾವು ಮಾರ್ಪಡಿಸಿದ ಬೀನೆ ಪರೀಕ್ಷೆಯನ ಶಾಲೆಗಳಲ್ಲಿ ಉಪಯೋಗಿಸಲು ಬಹಿರಂಗಪಡಿಸಿದರು. ಬೀ ಪರೀಕ್ಷೆಯಲ್ಲಿ ಬಹಳ ಬದಲಾವಣೆಗಳನ್ನು ಮಾಡಿದರು. ಹೊ ಹೊಸ ಅಂಶಗಳನ್ನು ಸೇರಿಸಿದರು. ಪರೀಕ್ಷೆಯನ್ನು ಕೊಡು ವಿಧಾನ, ಉತ್ತರಗಳಿಗೆ ಬೆಲೆಯನ್ನು ಕೊಡುವ ರೀತಿ ಬು ಶಕ್ತಿಯ ಪ್ರಮಾಣವನ್ನು ಕಂಡುಹಿಡಿಯುವ ಬಗೆ ಇವುಗಳನ ಸಮರ್ಪಕವಾಗಿ ಬದಲಾಯಿಸಿ ಒಂದು ಹೊಸ ಮಾದರಿ ಬುದ್ಧಿಶಕ್ತಿಯ ಪರೀಕ್ಷೆಯನ್ನೇ ಸಿದ್ಧಪಡಿಸಿದರು. ಈ ಪರೀ ಯನ್ನು ಸಾಧಾರಣವಾಗಿ ಅಮೆರಿಕಾ ದೇಶದ ಶಾಲೆಗಳಲ್ಲೆಲ ಉಪಯೋಗಿಸಲು ಪ್ರಾರಂಭಿಸಿದರು. ಇದರಿಂದ ಟರ್ಮನ್‌ರವ ಮಾರ್ಪಡಿಸಿದ ಬೀನೆ ಪರೀಕ್ಷೆಗೆ ಸಾಕಾದಷ್ಟು ಪ್ರಚಾ

ಸಿಕ್ಕಿತು. ಇದರ ಗೌರವ ಹೆಚ್ಚಿತು. ಮೊದಲನೆ ಬಾರಿಗೆ ಬುದ್ಧಿ ಶಕ್ತಿ ಪರೀಕ್ಷೆಗಳ ಫಲಿತಾಂಶವನ್ನು ಬುದ್ಧಿ ಪ್ರಮಾಣ (Intelligence Quotient) ಎಂಬ ಹೆಸರಿನಲ್ಲಿ ತಿಳಿಸಲು ಸಾಧ್ಯ ವಾಯಿತು. ಜರ್ಮನ್‌ದೇಶದ ವಿಲಿಯಂ ಸ್ಟೆರ್‌ರವರು ಬುದ್ಧಿ ಪ್ರಮಾಣ(Intelegence Quotient)ವನ್ನು ಕಂಡುಹಿಡಿಯುವ ಬಗೆಯನ್ನು ಸೂಚಿಸಿದ್ದರೂ ಟರ್ಮನ್‌ರವರು ಅದನ್ನು ಹೆಚ್ಚಾಗಿ ಬಳಸಿಕೊಂಡರು.

ಇಪ್ಪತ್ತೊಂದು ವರ್ಷಗಳ ಕಾಲ ಸ್ಟಾನ್‌ಪೋರ್ಡ್-ಬೀನೆಸ್ ಪರೀಕ್ಷೆಯು ಆಗಿನ ಕಾಲದಲ್ಲಿ ಬಳಕೆಯಲ್ಲಿದ್ದ ಬುದ್ಧಿಶಕ್ತಿ ಪರೀಕ್ಷೆ ಗಳಲ್ಲಿ ಬಹಳ ಉತ್ತಮವಾದುದೆಂದು ಪರಿಗಣಿಸಲ್ಪಟ್ಟಿದ್ದಿತು. ಈ ಪರೀಕ್ಷೆಯಿಂದ ಅಲ್ಲಿಯವರೆಗೂ ಬುದ್ಧಿಶಕ್ತಿ ಅಳತೆಯ ವಿಚಾರವಾಗಿದ್ದ ಸಂದೇಹ ಮತ್ತು ನಿರಾಶೆಗಳು ಕೊನೆ ಗೊಂಡುವು. ಹಲವಾರು ಮನೋವೈಜ್ಞಾನಿಕರ ಪರಿಶೋ ಧನೆಗಳು ಟರ್ಮನರವರ ಫಲಿತಾಂಶಗಳನ್ನು ಸಮರ್ಥಿಸಿದವು. ಬುದ್ಧಿಶಕ್ತಿ ಪರೀಕ್ಷೆಗಳ ಉಪಯುಕ್ತತೆಯನ್ನು ಮನೋ ವೈಜ್ಞಾನಿಕರು ಮತ್ತು ಶೈಕ್ಷಣಿಕರು ಮನಗಂಡರು. ಈ ಚಳವಳಿ ಎಲ್ಲಿಯವರೆಗೆ ಹೋಯಿತೆಂದರೆ ತಕ್ಕಡಿಯು ಹೇಗೆ ತೂಕವನ್ನು ಸರಿಯಾಗಿ ಸೂಚಿಸುತ್ತದೋ. ಹಾಗೆಯೇ ಬುದ್ಧಿಶಕ್ತಿಯನ್ನು ಸ್ಟಾನ್‌ಪೋರ್ಡ್-ಬೀನೆ ಪರೀಕ್ಷೆಯ ಬುದ್ಧಿಪ್ರಮಾಣ ತಿಳಿಸುತ್ತ ದೆಂದು ಜನರು ನಂಬಿದರು.

ಟರ್ಮನ್‌ರವರು ಪರಿಶೋಧನೆಗಳ ಫಲವಾಗಿ ತಾವು ಮಾರ್ಪಡಿ ಸಿದ ಬೀನೆ ಪರೀಕ್ಷೆಯು ಯೋಚಿಸಿದಷ್ಟು ಸಮರ್ಪಕವಾಗಿಲ್ಲ ವೆಂದು ತಿಳಿದರು. ಕೆಲವು ನ್ಯೂನತೆಗಳು ಕಂಡುಬಂದುವು. ಅವುಗಳನ್ನು ತೊಡೆದುಹಾಕಿ ಸಮರ್ಪಕವಾದ ಪರೀಕ್ಷೆ

ಯೊಂದನ್ನು ರಚಿಸಲು ತಮ್ಮ ಪರೀಕ್ಷೆಯನ್ನು ಮತ್ತೊಂದು ಸಲ ಮಾರ್ಪಡಿಸಲು ಪ್ರಯತ್ನಪಟ್ಟರು. ಅಮೆರಿಕಾ ದೇಶದ ಹಲವಾರು ಪ್ರದೇಶಗಳಲ್ಲಿ ಓದುತ್ತಿದ್ದ ನೂರು ಸಾವಿರ ವಿದ್ಯಾರ್ಥಿಗಳಿಗೆ ಈ ಪರೀಕ್ಷೆಯನ್ನು ಕೊಟ್ಟು ಅದರ ಅಂಕಿ ಅಂಶಗಳ ಆಧಾರದ ಮೇಲೆ ತಮ್ಮ ಹೊಸ ಪರೀಕ್ಷೆಯನ್ನು ೧೯೩೭ರಲ್ಲಿ ಪ್ರಚುರಪಡಿಸಿದರು. ಸರ್ವವಿಧದಲ್ಲಿಯೂ ಈ ಪರೀಕ್ಷೆ ಅವರ ಹಿಂದಿನ ಪರೀಕ್ಷೆಗಿಂತ ಉತ್ತಮವಾಗಿದೆ.

ಅಮೆರಿಕಾದಲ್ಲಿ ಬುದ್ಧಿಶಕ್ತಿ ಪರೀಕ್ಷೆಗಳ ಬೆಳೆವಣಿಗೆಯಲ್ಲಿ ಬಹಳ ಮಟ್ಟಿಗೆ ಉತ್ತೇಜನಕೊಟ್ಟ ಸನ್ನಿವೇಶ ಎಂದರೆ ೧೯೧೪-೧೮ರಲ್ಲಿ ನಡೆದ ಪ್ರಪಂಚದ ಮಹಾಯುದ್ಧ. ಯುದ್ಧಕ್ಕೆ ಲಕ್ಷಾಂತರ ಮಂದಿ ಸೈನಿಕರನ್ನೂ ಸೇರಿಸಿಕೊಳ್ಳಲಾಯಿತು. ಅವರನ್ನು ಶಕ್ತಿಸಾಮರ್ಥ್ಯಗಳ ಮೇಲೆ ವಿಂಗಡಿಸಿ ಸರಿಯಾದ ಶಿಕ್ಷಣವನ್ನು ಕೊಟ್ಟು ಬೇರೆ ಬೇರೆ ಕೆಲಸಗಳಿಗೆ ನಿಯಮಿಸಲು ಮನೋವೈಜ್ಞಾನಿಕರ ಸಹಾಯವನ್ನು ಪಡೆಯಬೇಕಾಯಿತು. ಯರ್ಕಿಸ್ ಎಂಬುವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿ ಬುದ್ಧಿಶಕ್ತಿ ಮತ್ತು ಇತರ ವಿಶೇಷ ಶಕ್ತಿಗಳ ಆಧಾರದ ಮೇಲೆ ಜನರನ್ನು ಆರಿಸಲು ಸಹಾಯ ಮಾಡುವಂತೆ ಕೇಳಿ ಕೊಳ್ಳಲಾಯಿತು. ಆ ಸಂದರ್ಭದಲ್ಲಿ ಸಾಮೂಹಿಕ ಬುದ್ಧಿಶಕ್ತಿ ಪರೀಕ್ಷೆಗಳನ್ನೂ ರಚಿಸಲು ಯರ್ಕಿಸ್ ಸಮಿತಿಯು ತೊಡಗಿತು. ಇಂತಹ ಸನ್ನಿವೇಶದಲ್ಲಿ ವೈಯಕ್ತಿಕ ಪರೀಕ್ಷೆಗಳಿಗಿಂತಲೂ ಸಾಮೂಹಿಕ ಪರೀಕ್ಷೆಗಳು ಕಾಲದ ದೃಷ್ಟಿಯಿಂದ ತುಂಬ ಉಪಯುಕ್ತವಾಗಿರುವುವೆಂದು ಭಾವಿಸಲಾಯಿತು. ಅದೇ ಸಮಯದಲ್ಲಿ ಓಟಿಸ್ ಎಂಬುವರು ಸಾಮೂಹಿಕ ಪರೀಕ್ಷೆಗಳ ನಿರ್ಮಾಣದಲ್ಲಿ ತೊಡಗಿದ್ದರು. ತಾವು ಮಾಡಿದ್ದ ಪರಿಶೋಧನ

ಗಳ ಫಲಿತಾಂಶವನ್ನೆಲ್ಲಾ ಯರ್ಕಿಸ್ ಸಮಿತಿಗೆ ಒಪ್ಪಿಸಿದರು. ಆ ಸಮಿತಿಯವರು ಓಟಿಸ್‌ರವರು ರಚಿಸಿದ್ದ ಸಾಮೂಹಿಕ ಪರೀಕ್ಷೆಗಳ ಆಧಾರದ ಮೇಲೆ ಅಲ್ಲಿಯವರೆಗೂ ನಡೆದಿದ್ದ ಬುದ್ಧಿಶಕ್ತಿ ಪರೀಕ್ಷೆಗಳ ಫಲಿತಾಂಶಗಳನ್ನು ಗಮನದಲ್ಲಿಟ್ಟು ಕೊಂಡು ಪ್ರಸಿದ್ಧಿಹೊಂದಿದ ಆರ್ಮಿ ಆಲ್ಫ-ಟೆಸ್ಟ್ (Army Alpha test) ಎಂಬ ಭಾಷೆಯಿಂದ ಕೂಡಿದ ಸಾಮೂಹಿಕ ಬುದ್ಧಿಶಕ್ತಿಯ ಪರೀಕ್ಷೆಯನ್ನು (verbal test) ರಚಿಸಿದರು. ಇಂಗ್ಲಿಷ್ ಭಾಷೆ ಗೊತ್ತಿಲ್ಲದವರ ಮತ್ತು ಅವಿದ್ಯಾವಂತರ ಬುದ್ಧಿಶಕ್ತಿಯನ್ನರಿಯಲು ಭಾಷಾರಹಿತ ಸಾಮೂಹಿಕ ಬುದ್ಧಿ ಶಕ್ತಿಯ ಪರೀಕ್ಷೆಯನ್ನೂ ತಯಾರಿಸಿದರು. ಇದಕ್ಕೆ ಬೀಟಾ ಟೆಸ್ಟ್ (Beta test) ಎಂದು ಹೆಸರು. ಆ ಸಮಯದಲ್ಲಿ ಸುಮಾರು ಹದಿನೇಳು ಲಕ್ಷ ಜನರನ್ನು ಪರೀಕ್ಷಿಸಲಾಯಿತು. ಆಗ ಕಂಡುಬಂದ ಅಂಶಗಳಿಂದ ಬುದ್ಧಿಶಕ್ತಿಯ ವಿಚಾರವಾಗಿ ಅನೇಕ ವಿಷಯಗಳನ್ನು ತಿಳಿಯಲು ಸಾಧ್ಯವಾಯಿತು.

ಬುದ್ಧಿಶಕ್ತಿಪರೀಕ್ಷೆಗಳನ್ನು ರಚಿಸುವ ಕೆಲಸ ಅಮೆರಿಕಾದಲ್ಲಿ ಎಲ್ಲಾ ದೇಶಗಳಿಗಿಂತಲೂ ಹೆಚ್ಚಾಗಿ ನಡೆಯಿತು. ಪಿಂಟ್ನರ್ ಮತ್ತು ಪ್ಯಾಟರರ್ಸ, ಥಾರ್ನ್‌ಡೈಕ್, ಥರ್ಸ್ಟರ್ನಾಕ್ಸ್, ಹೆನ್‌ಮರ್-ನೆಲ್ಸರ್, ಗ್ರೇಸ್ ಆರ್ಥರ್, ರೇಮಂಡ್ ಬಿ, ಕ್ಯಟೇಲ್, ಡೇವಿಡ್, ಬಿ ವೆಕ್ಸ್ಲರ್ ಮೊದಲಾದ ಮನೋ ವೈಜ್ಞಾನಿಕರು ಭಾಷೆಯಿಂದ ಕೂಡಿದ ಮತ್ತು ಭಾಷಾರಹಿತ ಬುದ್ಧಿಶಕ್ತಿ (Non verbal tests) ಪರೀಕ್ಷೆಗಳನ್ನು ಮಕ್ಕಳಿಗೂ ಮತ್ತು ವಯಸ್ಕರಿಗೂ ರಚಿಸಿದ್ದಾರೆ.

ಬೀನೆ ಪರೀಕ್ಷೆಯನ್ನು ಇಂಗ್ಲೆಂಡಿನಲ್ಲಿ ಸಿರಿಲ್‌ಬರ್ಟ್‌ರವರು ಮಾರ್ಪಡಿಸಿ ೧೯೨೨ ರಲ್ಲಿ ಮಾನಸಿಕ ಮತ್ತು ಶಾಲೆಯ ಪರೀಕ್ಷೆ

ಗಳು (Mental and Scholastic tests) ಎಂಬ ಹೆಸರಿನಲ್ಲಿ
ಪ್ರಚುರಪಡಿಸಿದರು. ಬಾಬರ್‌ಟ್ಯಾಗ್ ಎಂಬುವರು ಇದೇ ಕೆಲಸ
ವನ್ನು ಜರ್ಮನಿಯಲ್ಲಿ ೧೯೧೩ ರಲ್ಲಿ ಮಾಡಿದರು. ಜಪಾನಿನಲ್ಲಿ
೧೯೧೭ ರಲ್ಲೇ ಈ ಕೆಲಸ ನಡೆಯಿತು. ಮುಂದುವರಿದ ಇತರ
ದೇಶಗಳಲ್ಲಿಯೂ ಬೀನೆ ಅವರ ಪರೀಕ್ಷೆಯನ್ನೂ ಆಯಾ
ದೇಶಗಳ ಸಂಸ್ಕೃತಿಗೆ ಅಳವಡಿಸಿಕೊಂಡು ಉಪಯೋಗಿಸ
ಲಾಯಿತು.

ನಮ್ಮ ದೇಶದಲ್ಲಿ ಬುದ್ಧಿಶಕ್ತಿಯ ಪರೀಕ್ಷೆಗಳನ್ನು ರಚಿಸಲು
ತೊಡಗಿದವರಲ್ಲಿ ಮೊದಲಿಗರು ಲಾಹೋರಿನಲ್ಲಿ ಕೆಲಸಮಾಡು
ತ್ತಿದ್ದ ಸಿ. ಹೆಚ್. ರೈಸ್‌ರವರು. ಇವರು ಬೀನೆ ಪರೀಕ್ಷೆಯನ್ನು
ಪಂಜಾಬಿ ವಿದ್ಯಾರ್ಥಿಗಳಿಗೋಸ್ಕರ ಮಾರ್ಪಡಿಸಿ ಕೈಕೆಲಸದಿಂದ
ಕೂಡಿದ ಕೆಲವು ಪರೀಕ್ಷೆಗಳನ್ನು ಅದಕ್ಕೆ ಸೇರಿಸಿದರು. ಇವರು
ಮಾರ್ಪಡಿಸಿದ ಪರೀಕ್ಷೆಗಳು ಹಿಂದೂಸ್ಥಾನಿ ಭಾಷೆಯಲ್ಲಿರು
ವುದರಿಂದ ಪಂಜಾಬಿ ವಿದ್ಯಾರ್ಥಿಗಳ ಮತ್ತು ಹಿಂದೂಸ್ಥಾನಿ
ಭಾಷೆಯಾಡುವ ಇತರ ಪ್ರದೇಶಗಳ ಹುಡುಗರ ಬುದ್ಧಿಶಕ್ತಿ
ಯನ್ನೂ ಅಳೆಯಲು ಉಪಯೋಗಿಸಬಹುದೆಂದು ಕೆಲವರ
ಅಭಿಪ್ರಾಯವಾಗಿದೆ. ೫ ರಿಂದ ೧೬ ವಯಸ್ಸಿನ ೧೦೭೦ ಮಂದಿ
ಪಂಜಾಬಿ ಹುಡುಗರಿಗೆ ಪರೀಕ್ಷೆಯನ್ನು ಕೊಟ್ಟರು. ಅದರ
ಫಲಿತಾಂಶದಿಂದ ಪ್ರಮಾಣಪಟ್ಟ (Norms) ಯನ್ನು ನಿರ್ಧರಿ
ಸಿದರು. ಉತ್ತರನ ಅಂಕಿಗಳಿಂದ ನೇರವಾಗಿ ಮಾನಸಿಕ
ವಯಸ್ಸನ್ನು ಕಂಡುಹಿಡಿಯುವ ಹಾಗೆ ಮಾಡಿದರು. ಈ
ಪರೀಕ್ಷೆಗಳು ಅಷ್ಟು ಸಮರ್ಪಕವಾಗಿ ಕಂಡುಬರಲಿಲ್ಲವಾದ್ದ
ರಿಂದ ಅವುಗಳನ್ನು ಹೆಚ್ಚಾಗಿ ಯಾರೂ ಬಳಸಲಿಲ್ಲ.

ಅನಂತರ ಕಲ್ಕತ್ತ, ಮಧ್ಯಪ್ರದೇಶ, ಮದ್ರಾಸು ಈ ಪ್ರಾಂತ್ಯ

ಗಳಲ್ಲಿ ಭಾಷೆಯಿಂದ ಕೂಡಿದ ಬುದ್ಧಿಶಕ್ತಿ ಪರೀಕ್ಷೆಗಳ ರಚನಾಕ್ರಮ ಪ್ರಯತ್ನಗಳು ನಡೆದುವು. ಅವಕ್ಕೆ ಸರಿಯಾದ ಉತ್ತೇಜನ ಸಿಕ್ಕಿದ ಹಾಗೆ ಕಾಣಲಿಲ್ಲ. ದೈನಂದಿನ ಜೀವನದಲ್ಲಿ ಅವುಗಳ ಬಳಕೆಯು ಅಷ್ಟೇನೂ ಕಾಣಲಿಲ್ಲ.

ಕನ್ನಡದಲ್ಲಿ ಬುದ್ಧಿ ಶಕ್ತಿ ಪರೀಕ್ಷೆಗಳನ್ನು ಮೊಟ್ಟಮೊದಲು ರಚಿಸಿದವರು ಕಾಮತ್‌ರವರು. ಇವರು ಬೀನೆ ಪರೀಕ್ಷೆಯನ್ನೂ ಕನ್ನಡ ಮತ್ತು ಮಹಾರಾಷ್ಟ್ರಭಾಷೆಗಳಿಗೆ ತರ್ಜುಮೆ ಮಾಡಿ ಆ ಎರಡು ಭಾಷೆಗಳ ವಿದ್ಯಾರ್ಥಿಗಳಿಗೆ ಸರಿಹೋಗುವಂತೆ ಅಳವಡಿಸಿದರು. ಆ ಪರೀಕ್ಷೆಗಳನ್ನು ಮೈಸೂರು ಬೆಂಗಳೂರುಗಳಲ್ಲಿರುವ ಶಾಲೆಗಳ ವಿದ್ಯಾರ್ಥಿಗಳಿಗೆ ಉಪಯೋಗಿಸಲು ಸಾಧ್ಯವೇ ಎಂದು ಕೆಲವರು ಕೇಳಬಹುದು. ಇಲ್ಲಿನ ವಿದ್ಯಾರ್ಥಿಗಳಿಗೆ ಅವರು ಉಪಯೋಗಿಸಿರುವ ಕನ್ನಡದ ಕೆಲವು ಪದಗಳು ಅರ್ಥವಾಗದಿರಬಹುದು. ಪದಗಳನ್ನು ಬದಲಾಯಿಸಿ ವೈಜ್ಞಾನಿಕ ಮಾರ್ಗದಲ್ಲಿ ಮಾರ್ಪಡಿಸಿದ ಮೇಲೆ ಹಳೆಯ ಮೈಸೂರಿನ ಶಾಲೆಗಳಲ್ಲಿ ಉಪಯೋಸಬಹುದು. ಧಾರವಾಡ, ಬೆಳಗಾಂ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಅವರ ಪರೀಕ್ಷೆಯನ್ನು ನೇರವಾಗಿ ಉಪಯೋಗಿಸಬಹುದು. ವೈಜ್ಞಾನಿಕ ರೀತಿಯಲ್ಲಿ ಕಾಮತ್‌ರವರು ಬೀನೆ ಪರೀಕ್ಷೆಯನ್ನು ಮರಾಠಿ ಮತ್ತು ಕನ್ನಡ ಭಾಷೆಗಳಿಗೆ ಅಳವಡಿಸಿಕೊಂಡಿರುವುದರಿಂದ ಅದರ ಉಪಯುಕ್ತತೆ ಕನ್ನಡಿಗರಿಗೆ ಹೆಚ್ಚಾಗಿದೆ.

ಇತ್ತೀಚಿಗೆ ಬೊಂಬಾಯಿನಲ್ಲಿರುವ ಗುಜರಾತ್ ಪರಿಶೋಧನಾಲಯದಲ್ಲಿ ಡೈರೆಕ್ಟರಾಗಿರುವ ಶುಕ್ಲರವರು ಸ್ಟ್ಯಾನ್‌ಫರ್ಡ್-ಬೀನೆ ಪರೀಕ್ಷೆಯನ್ನೂ ಗುಜರಾತಿ ಭಾಷೆಗೆ ಅಳವಡಿಸಿಕೊಂಡಿದ್ದಾರೆ. ಹೀಗೆ ಇನ್ನೂ ಕೆಲವು ಭಾಷೆಗಳಲ್ಲಿ ಬೀನೆ ಪರೀಕ್ಷೆಯನ್ನೂ ಮಾರ್ಪಡಿಸಿರುವಂತೆ ಕಾಣುತ್ತದೆ.

ಬೀನೆಪರೀಕ್ಷೆಗಳನ್ನೂ ಬಿಟ್ಟು ಇತರ ಬುದ್ಧಿಶಕ್ತಿ ಪರೀಕ್ಷೆಗ ಆಧಾರದ ಮೇಲೆ ಕೆಲವು ಪರೀಕ್ಷೆಗಳನ್ನು ರಚಿಸಲಾಗಿದೆ ೧೯೪೧ ರಲ್ಲಿ ಸೋಹನ್‌ಲಾಲ್‌ರವರು ಅಲಹಾಬಾದಿ ಸರ್ಕಾರದ ಉಪಾಧ್ಯಾಯರ ಶಿಕ್ಷಣ ಕಾಲೇಜಿನಲ್ಲಿ ಪ್ರಾಧ್ಯಾಪ ರಾಗಿದ್ದರು. ೧೧ ಮತ್ತು ೧೨ ನೆಯ ವಯಸ್ಸಿನ ವಿದ್ಯಾರ್ಥಿ ಗಳ ಬುದ್ಧಿಶಕ್ತಿ ಅಳೆಯಲು ಹಿಂದಿ ಮತ್ತು ಉರ್ದುಭಾಷೆಯ ಕೆಲವು ಪರೀಕ್ಷೆಗಳನ್ನೂ ಮೊರೆಹೌಸ್ ಪರೀಕ್ಷೆಗಳ ಆಧಾರ ಮೇಲೆ ರಚಿಸಿ ಉತ್ತರ ಪ್ರದೇಶದ ಶಾಲೆ ಮಕ್ಕಳ ಬುದ್ಧಿಶಕ್ತಿ ಯನ್ನು ಅಳೆಯಲು ಪ್ರಯತ್ನಿಸಿದರು. ನಮಗೆ ತಿಳಿದಿರುವಂ ಮಕ್ಕಳ ಬುದ್ಧಿಶಕ್ತಿಯ ಮಟ್ಟವನ್ನು ತಿಳಿಯಲು ನಮ್ಮ ದೇ ದಲ್ಲಿ ನಡಸಿದ (Survey) ಪ್ರಯೋಗಗಳಲ್ಲಿ ಇದೇ ಮೊದಲ ಯದು. ಇವರು ರಚಿಸಿದ ಪರೀಕ್ಷೆ ಸಾಮೂಹಿಕ ಭಾಷ ಪರೀಕ್ಷೆ. ಅದನ್ನು ವೈಜ್ಞಾನಿಕ ರೀತಿಯಲ್ಲಿ ರಚಿಸಿದ್ದಾರೆ ಅಲಹಾಬಾದಿನಲ್ಲಿ ಬ್ಯೂರೋ ಆಫ್ ಸೈಕಾಲಜಿ ಸಂಸ್ಥೆಯವರ ಸೋಹನ್ ಲಾಲ್‌ರವರ ಪರಿಶೋಧನೆಗಳ ಆಧಾರದ ಮೇ ಮೂರು ಬುದ್ಧಿಶಕ್ತಿ ಪರೀಕ್ಷೆಗಳನ್ನು ಹಿಂದಿಯಲ್ಲಿ ರಚಿಸಿದ್ದಾರೆ ಅವಕ್ಕೆ ಬಿ.ಪಿ.ಟಿ. ೭, ೮, ೧೨ ಎಂದು ಹೆಸರಿಟ್ಟಿದ್ದಾರೆ ಬಿ.ಪಿ.ಟಿ. ೭ ನ್ನು ಹದಿಮೂರು ವರ್ಷದವರಿಗೂ, ಬಿ.ಪಿ.ಟಿ ೮ ನ್ನು ಹದಿನಾಲ್ಕು ವರ್ಷದವರಿಗೂ, ಬಿ.ಪಿ.ಟಿ. ೧೨ ನ್ನು ಹನ್ನೆರಡು ವರ್ಷದವರಿಗೂ ಉಪಯೋಗಿಸುತ್ತಿದ್ದಾರೆ.

ಇದೇ ಸಂಸ್ಥೆಯ ಡೈರೆಕ್ಟರಾಗಿದ್ದ ಭಾಟಿಯಾರವರು ನಾಲ್ಕು ವರ್ಷಗಳ ಹಿಂದೆ ಕೈಕೆಲಸದಿಂದ ಕೂಡಿದ ಕೆಲವು ಬುದ್ಧಿ ಶಕ್ತಿಯ ಪರೀಕ್ಷೆಗಳ ಗುಂಪೊಂದನ್ನು ರಚಿಸಿದ್ದಾರೆ ಎನ್ನುವುದ ಕ್ಕಿಂತಲೂ ಹೊರಗಿನವರ ಪರೀಕ್ಷೆಗಳನ್ನು ಅಳವಡಿಸಿಕೊಂಡಿ

ದ್ದಾರೆ ಎಂದರೆ ತಪ್ಪಾಗಲಾರದು. ೧೧ ಮತ್ತು ೧೬ ವರ್ಷ ವಯಸ್ಸಿನೊಳಗಿರುವ ೧,೧೫೪ ಹುಡುಗರಿಗೆ ಈ ಪರೀಕ್ಷೆಗಳನ್ನು ಕೊಟ್ಟು ಬಂದ ಫಲಿತಾಂಶದ ಆಧಾರದ ಮೇಲೆ ಪರೀಕ್ಷೆಗಳನ್ನು ಮಾರ್ಪಡಿಸಿ ನಮ್ಮ ದೇಶದಲ್ಲಿ ಅವುಗಳನ್ನು ಉಪಯೋಗಿಸಲು ಪ್ರಯತ್ನಪಟ್ಟಿದ್ದಾರೆ. ಬುದ್ಧಿಶಕ್ತಿಯ ಅಳತೆಯ ವಿಚಾರ ವಾಗಿ ಅಲಹಾಬಾದಿನಲ್ಲಿ ಸಾಕಾದಷ್ಟು ಕೆಲಸ ನಡೆದಿದೆ.

ಎವಿಂಗ್ ಕ್ರಿಶ್ಚಿಯನ್ ಕಾಲೇಜಿನ ಮ್ಯಾನ್ರಿಯವರು, ಬೆನಾರಿಸ್ ವಿಶ್ವವಿದ್ಯಾನಿಲಯದ ಲಜ್ಜಾಶಂಕರ್‌ಜಾರವರು, ಅದೇ ವಿಶ್ವವಿದ್ಯಾನಿಲಯದ ಜಲೋಟಾರವರು (ಇವರು ಲಾಹೋರಿನಲ್ಲಿದ್ದಾಗ) ಲಾಹೋರಿನ ಟ್ರೈನಿಂಗ್ ಕಾಲೇಜಿನ ರುಮ್ರಿಯಾರವರು, ಬೊಂಬಾಯಿನ ಕೆ. ಜಿ. ದೇಸಾಯಿ ಯವರು, ಪಾಟ್ನಾ ವಿಶ್ವವಿದ್ಯಾನಿಲಯದ ಮೋಕ್ಷಿನ್‌ರವರು ಮೊದಲಾದ ಮಹನೀಯರುಗಳು ಬುದ್ಧಿಶಕ್ತಿಯ ಪರೀಕ್ಷೆಗಳನ್ನು ಆಯಾಭಾಗದ ವಿದ್ಯಾರ್ಥಿಗಳಿಗೋಸ್ಕರ ಸಿದ್ಧಪಡಿಸಿದ್ದಾರೆ.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ದಿವಂಗತ ಎಂ. ವಿ. ಗೋಪಾಲಸ್ವಾಮಿಯವರು ವಿದೇಶದ ಕೆಲವು ಬುದ್ಧಿಶಕ್ತಿಯ ಪರೀಕ್ಷೆಗಳನ್ನೂ ಇಲ್ಲಿನ ವಿದ್ಯಾರ್ಥಿಗಳಿಗೆ ಅಳವಡಿಸಲು ಬಹಳ ಹಿಂದೆಯೇ ಪ್ರಯತ್ನಪಟ್ಟರು. ಆದರೆ ಆ ಕೆಲಸವನ್ನು ಮುಂದುವರಿಸಲಿಲ್ಲ. ಈಚೀಚೆಗೆ ವಿದೇಶದ ಮತ್ತೆ ಕೆಲವು ಪರೀಕ್ಷೆ ಗಳನ್ನು ಮಾರ್ಪಡಿಸಿ ಹೈಸ್ಕೂಲಿನಲ್ಲಿ ಉಪಯೋಗಿಸಲು ಪ್ರಯತ್ನ ನಡೆದಿದೆ. ಈ ಕೆಲಸವನ್ನು ವಿದ್ಯಾರ್ಥಿಗಳು ತಮ್ಮ ಎಂ.ಎ. ಪರೀಕ್ಷೆಯ ಪರಿಶೋಧನೆಯ ಅಂಗವಾಗಿ ಮಾಡಿದು ದಾಗಿದೆ. ಸಮರ್ಪಕವಾದ ಪರೀಕ್ಷೆಗಳನ್ನು ತಯಾರು ಮಾಡ ಬೇಕಾದರೆ ಸರಿಯಾದ ಯೋಜನೆ ಅವಶ್ಯಕವಾಗಿರುತ್ತದೆ.

ಮನೋವೈಜ್ಞಾನಿಗಳು ಶೈಕ್ಷಣಿಕರು ಬುದ್ಧಿಶಕ್ತಿಯ ಪರೀಕ್ಷೆಗಳ
ಬೆಲೆಯನ್ನು ತಿಳಿದುಕೊಂಡಿದ್ದಾರೆ. ಅವುಗಳನ್ನು ರಚಿಸಲು
ಉತ್ತೇಜನ ಕೊಡುತ್ತಿದ್ದಾರೆ. ಕೆಲವು ವಿಶ್ವವಿದ್ಯಾನಿಲಯ
ಗಳ ಮನಶ್ಶಾಸ್ತ್ರದ ಇಲಾಖೆಗಳಲ್ಲಿಯೂ ಹಲವು ಟ್ರೈನಿಂಗ್
ಕಾಲೇಜುಗಳಲ್ಲಿಯೂ ಕೆಲವು ಔದ್ಯೋಗಿಕ ಮಾರ್ಗದರ್ಶನ
ಸಂಸ್ಥೆಗಳಲ್ಲಿಯೂ (guidance Bureaux) ಮತ್ತೆ ಕೆಲವು
ಮನಶ್ಶಾಸ್ತ್ರದ ಪರಿಶೋಧನಾಲಯಗಳಲ್ಲಿಯೂ ಬುದ್ಧಿಶಕ್ತಿಯ
ಪರೀಕ್ಷೆಗಳ ರಚನೆ, ಮಾರ್ಪಡಿಸುವಿಕೆ ಮೊದಲಾದುವುಗಳ ಬಗ್ಗೆ
ಆಯಾ ಭಾಗದ ಭಾಷಾವಾರು ದೃಷ್ಟಿಯಿಂದ ಕೆಲಸ ನಡೆಯು
ತ್ತಿದೆ.

ಭಾಷಾರಹಿತ ಪರೀಕ್ಷೆಗಳ ಆವಶ್ಯಕತೆ:—

ನಮ್ಮ ದೇಶದಲ್ಲಿ ಹಲವಾರು ಭಾಷೆಗಳನ್ನು ಜನರು ಉಪ
ಯೋಗಿಸುತ್ತಾರೆ. ಎಲ್ಲರೂ ಆಡುವಂತಹ ಒಂದು ಭಾಷೆ
ನಮ್ಮಲ್ಲಿಲ್ಲ. ಆಂಗ್ಲೇಯ ಭಾಷೆಯನ್ನು ಕಡೆಯ ಪಕ್ಷ ಪ್ರೌಢ
ಶಾಲೆಯ ಮೆಟ್ಟಿಲನ್ನು ಹತ್ತಿರುವವರೆಲ್ಲರೂ ಸ್ವಲ್ಪಮಟ್ಟಿಗೆ
ಅರಿತಿರುತ್ತಾರೆ. ಅದನ್ನು ಬಿಟ್ಟರೆ ಯೂನಿಯನ್ ಸರ್ಕಾರದ
ಬೆಂಬಲವಿರುವ ಹಿಂದಿ ಭಾಷೆಯೊಂದೇ ರಾಷ್ಟ್ರಭಾಷೆಯಾಗುವ
ಸಂಭವವಿದೆ. ಜೊತೆಗೆ ಮಾತೃಭಾಷೆಯಷ್ಟು ಸುಲಭವಾಗಿ
ಆಲೋಚನೆಗಳನ್ನು ತಿಳಿಯಪಡಿಸಲು ಹಿಂದಿಯಲ್ಲಿ ಬಳಕೆ ಬ
ಬೇಕಾಗುತ್ತದೆ. ಇಂತಹ ಸನ್ನಿವೇಶವೊಂದು ಒದಗಬೇಕಾದ
ಹಲವಾರು ವರ್ಷಗಳು ಕಾಯಬೇಕು.

ಇದಲ್ಲದೇ ಹಿಂದೂ ಸಂಸ್ಕೃತಿ ಒಂದೇ ಆದರೂ ಬೇರೆ ಬೇ
ಪ್ರದೇಶಗಳಲ್ಲಿ ವ್ಯತ್ಯಾಸವು ಕಂಡುಬರುತ್ತಿದೆ. ದಕ್ಷಿಣ ಭಾರ
ಮತ್ತು ಉತ್ತರ ಭಾರತದವರಲ್ಲಿ ಊಟ, ತೊಡಿಗೆ, ಸಂಗೀತ

ಕಲೆ, ಮೊದಲಾದುವುಗಳಲ್ಲಿ ಕಂಡುಬರುವ ವ್ಯತ್ಯಾಸಗಳು ದೇಶವನ್ನು ಸುತ್ತಿದವರೆಲ್ಲರಿಗೂ ತಿಳಿದಿರುವ ವಿಷಯ. ದಕ್ಷಿಣ ದೇಶದಲ್ಲೇ ಮೈಸೂರಿನವರಿಗೂ ಮದರಾಸಿನವರಿಗೂ ಆಂಧ್ರ ದವರಿಗೂ ನಡೆನುಡಿಗಳಲ್ಲಿ ತಾರತಮ್ಯಗಳನ್ನು ನಾವು ಕಾಣ ಬಹುದು. ಮೈಸೂರಿನಲ್ಲೇ ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕದವರಲ್ಲಿ ಸಂಸ್ಕೃತಿ ವ್ಯತ್ಯಾಸಗಳನ್ನು ಕಾಣುತ್ತಿದ್ದೇವೆ. ಆದ್ದರಿಂದ ನಾವು ರಚಿಸಿರುವ ಬುದ್ಧಿಶಕ್ತಿ ಪರೀಕ್ಷೆಗಳಲ್ಲಿ ನಮ್ಮ ಸುತ್ತಮುತ್ತಲಿನ ಸಂಸ್ಕೃತಿಯ ಫಲವಿದ್ದೇ ಇರುತ್ತದೆ. ಅಷ್ಟೇಕೆ ಒಂದೇ ಜಿಲ್ಲೆಯಲ್ಲಿ ಓದುವ ವಿದ್ಯಾರ್ಥಿಗಳ ಬುದ್ಧಿಶಕ್ತಿಯ ಪರೀಕ್ಷೆಯನ್ನು ತೆಗೆದುಕೊಂಡಲ್ಲಿ ಅದನ್ನು ರಚಿಸುವಾಗ ಕೇವಲ ಪಟ್ಟಣದ ವಿದ್ಯಾರ್ಥಿಗಳನ್ನೇ ಆರಿಸಿ ಕೊಂಡರೆ, ಆ ಪರೀಕ್ಷೆಯನ್ನು ಹಳ್ಳಿಯ ವಿದ್ಯಾರ್ಥಿಗಳಿಗೆ ಕೊಟ್ಟು ಅವರ ಬುದ್ಧಿಶಕ್ತಿಯ ಪ್ರಮಾಣವನ್ನು ಸಮರ್ಪಕವಾಗಿ ನಿರ್ಧರಿಸಲಾಗುವುದಿಲ್ಲ. ಹಳ್ಳಿಯವರ ಸಂಸ್ಕೃತಿಗೂ ಪಟ್ಟಣ ದವರ ಸಂಸ್ಕೃತಿಗೂ ವ್ಯತ್ಯಾಸವಿದೆ. ಆದ್ದರಿಂದ ಭಾಷೆ ಮತ್ತು ಸಂಸ್ಕೃತಿ ಎರಡನ್ನೂ ಗಣನೆಗೆ ತೆಗೆದುಕೊಳ್ಳದೆ, ಒಂದು ವೇಳೆ ಭಾಷೆಯನ್ನು ಆದಷ್ಟುಮಟ್ಟಿಗೆ ಹೊರದೂಡಿ ಎಲ್ಲರಲ್ಲಿಯೂ ಸಾಮಾನ್ಯವಾಗಿ ಕಾಣುವ ಸಂಸ್ಕೃತಿಯ ಆಧಾರದ ಮೇಲೆ ಬುದ್ಧಿಶಕ್ತಿ ಪರೀಕ್ಷೆಗಳನ್ನು ರಚಿಸಿದರೆ ಆಗ ನಾವು ಧೈರ್ಯದಿಂದ ಅವುಗಳನ್ನು ದೇಶದ ಎಲ್ಲಾ ಭಾಗಗಳಲ್ಲಿಯೂ ಉಪಯೋಗಿ ಸಲು ಸಾಧ್ಯವಾಗುತ್ತದೆ ಮತ್ತು ದೇಶದ ಮಕ್ಕಳ ಮತ್ತು ಯುವಕರ ಬುದ್ಧಿಶಕ್ತಿಯ ಮಟ್ಟವನ್ನು ಅರಿಯಲು ಅವಕಾಶ ವಾಗುತ್ತದೆ.

ಭಾಷಾರಹಿತ ಬುದ್ಧಿಶಕ್ತಿ ಪರೀಕ್ಷೆಗಳನ್ನು ಅಮೇರಿಕಾದಲ್ಲಿ

ನಾಕ್ಸ್‌ರವರು ೧೯೧೪ ರಲ್ಲಿ ರಚಿಸಿದರು. ಮುಂದ ಬುದ್ಧಿಯುವರು ಮತ್ತು ದಡ್ಡರನ್ನು ಕಂಡುಹಿಡಿಯಲು ಈ ಪರೀಕ್ಷೆಗಳನ್ನು ಉಪಯೋಗಿಸಿದರು. ಈ ಪರೀಕ್ಷೆಗಳನ್ನು ಅಷ್ಟು ಸಮರ್ಪಕ ವಾಗಿ ತಯಾರಿಸಲಿಲ್ಲವಾದರೂ ಮುಂದಿನ ರಚನಕಾರರು ಇವು ಗಳನ್ನು ಪಯೋಗಿಸಿಕೊಂಡು ಸಮರ್ಪಕವಾದ ಪರೀಕ್ಷೆಗಳನ್ನು ತಯಾರಿಸಿದರು. ೧೯೧೪-೧೮ ರಲ್ಲಿ ಆಂಗ್ಲೇಯ ಭಾಷಾ ಪರಿಚಯವಿಲ್ಲದ ಸೈನಿಕರ ಬುದ್ಧಿಶಕ್ತಿಯನ್ನರಿಯಲು ಆರ್ಮಿ ಬೀಟಾ ಎಂದು ಕರೆಯಲ್ಪಟ್ಟ ಸಾಮೂಹಿಕ ಭಾಷಾರಹಿತ ಪರೀಕ್ಷೆಗಳನ್ನು ತಯಾರ್ಮ್ಾಡಲಾಯಿತು. ೧೯೧೭ರಲ್ಲಿ ಪಿಂಟ್ನರ್ ಮತ್ತು ಪ್ಯಾಟರ್‌ಸ್ಸರವರು ಭಾಷಾರಹಿತ ಪರೀಕ್ಷೆಗಳ ಗುಂಪೊಂದನ್ನು ತಯಾರಿಸಿದರು. ಇದಕ್ಕೆ "ಕೈ ಕೆಲಸದ ಪರೀಕ್ಷೆ ಗಳೆಂದು" ಹೆಸರಾಯಿತು. ಅನಂತರ ಉಳಿದವರು ಭಾಷಾರಹಿತ ಪರೀಕ್ಷೆಗಳನ್ನು ರಚಿಸಲು ಪ್ರಾರಂಭಿಸಿದರು. ಅವುಗಳಲ್ಲಿ ಪ್ರಸಿದ್ಧಿಗೆ ಬಂದವುಗಳೆಂದರೆ ಗ್ರೇಸ್ ಆರ್ಥರ್‌ರವರು ರಚಿಸಿದ ಪರೀಕ್ಷೆಗಳು ಮತ್ತು ಕಾರ್ನೆಲ್‌ಕಾಕ್ಸ್ ಸೀರೀಸ್ ಎಂಬ ಪರೀಕ್ಷೆ ಗಳು.

ಇಂಗ್ಲೆಂಡ್ ದೇಶದಲ್ಲಿ ರಚಿಸಲ್ಪಟ್ಟ ಭಾಷಾರಹಿತ ಪರೀಕ್ಷೆ ಗಳಲ್ಲಿ ಮೇರಿಕಾಲಿನ್ಸ್ ಮತ್ತು ಜೇಮ್ಸ್‌ಡ್ರೆವರ್‌ರವರು ರಚಿಸಿದ ಕೈಕೆಲಸದ ಪರೀಕ್ಷೆಗಳು, ಅಲೆಗ್ಝಾಂಡರ್‌ರವರು ತಯಾರಿಸಿದ ಕ್ರಿಯಾತ್ಮಕ ಬುದ್ಧಿಶಕ್ತಿ ಮಾಪನ Performance scale of Intelligence) ಮತ್ತು ರೇವನ್ಸ್‌ರವರು ನಿರ್ಮಿಸಿದ ಪ್ರೋಗ್ರೆಸಿವ್ ಮೆಟ್ರಿಸಸ್ ಪರೀಕ್ಷೆಗಳನ್ನು ಉದಹರಿಸಬಹುದು. ರೇವನ್ಸ್ ರವರ ಪರೀಕ್ಷೆಗಳನ್ನು ವೈಯಕ್ತಿಕವಾಗಿ ಆಗಲಿ ಅಥವಾ ಸಾಮೂಹಿಕವಾಗಿ ಆಗಲಿ ಕೊಡಬಹುದು. ಮಕ್ಕಳಿಗೂ

ವಯಸ್ಕರಿಗೂ ಪರೀಕ್ಷೆಗಳನ್ನು ರಚಿಸಿದ್ದಾರೆ. ಅಲೆಗ್ಸಾಂಡರಿನ ಪರ್‌ಫಾರ್ಮೆನ್ಸ್ ಸ್ಕೇಲನ್ನೂ ಮತ್ತು ರೇವನ್ಸ್‌ನ ಪ್ರೊಗ್ರೆಸಿವ್ ಮೆಟ್ರಿಸಸ್ ಪರೀಕ್ಷೆಗಳನ್ನೂ ಹಲವಾರು ಮನಶ್ಶಾಸ್ತ್ರದ ಪ್ರಯೋಗ ಶಾಲೆಗಳಲ್ಲಿ ಉಪಯೋಗಿಸುತ್ತಿದ್ದಾರೆ. ಈ ಪರೀಕ್ಷೆಗಳು ಸಮರ್ಪಕವಾಗಿ ಬುದ್ಧಿಶಕ್ತಿಯನ್ನು ಅಳೆಯುವುವೇ ಎಂಬ ವಿಷಯದಲ್ಲಿ ಸಂದೇಹವುಳ್ಳವರಿದ್ದಾರೆ.

ಭಾಟಿಯಾರವರ ಪರೀಕ್ಷೆಗಳನ್ನು ದೇಶದಾದ್ಯಂತ ಉಪಯೋಗಿಸಬಹುದಾದರೂ ಹಲವು ಕಾರಣಗಳಿಂದ ಇವುಗಳ ಉಪಯುಕ್ತತೆ ಕಡಮೆಯಾಗಿರುತ್ತದೆ. ಇದು ವೈಯಕ್ತಿಕ ಪರೀಕ್ಷೆ; ಸಾಮೂಹಿಕ ಪರೀಕ್ಷೆಯಲ್ಲ. ಇದನ್ನುಪಯೋಗಿಸಲು ಶಿಕ್ಷಣ ಪಡೆದ ಮನೋವೈಜ್ಞಾನಿಕರು ಬೇಕು. ಇದನ್ನು ತಯಾರಿಸಿದ ವೈಜ್ಞಾನಿಕ ರೀತಿಯಲ್ಲಿ ಹಲವು ಲೋಪದೋಷಗಳು ಕಾಣಬರುತ್ತಿವೆ. ಜೊತೆಗೆ ಇವು ಸಂಸ್ಕೃತಿಯ ಫಲದಿಂದ ವಿಮುಕ್ತವಾಗಿವೆ ಎಂದು ಹೇಳಲಾಗುವುದಿಲ್ಲ.



ಇತ್ತೀಚೆಗೆ ಕಲ್ಕತ್ತಾದಲ್ಲಿರುವ ಇಂಡಿಯನ್ ಸ್ಟ್ಯಾಟಿಸ್ಟಿಕಲ್ ಇನ್ಸ್ಟಿಟ್ಯೂಟಿನಲ್ಲಿ ಸೈಕೊ ಮೆಟ್ರಿಕ್ ಯೂನಿಟ್ಟಿನ ಮುಖ್ಯಾಧಿಕಾರಿಗಳಾದ ಶಿವಕುಮಾರ ಮಿತ್ರರವರು ತಾವು ರಚಿಸಿರುವ ಭಾಷಾರಹಿತ ಪರೀಕ್ಷೆಗಳಲ್ಲಿ ಆಶಾಕಿರಣವನ್ನು ತೋರಿಸುತ್ತಿದ್ದಾರೆ. ಈಗಾಗಲೆ ತಮ್ಮ ಪರೀಕ್ಷೆಯನ್ನು ಒಂದು ಸಾವಿರ ವಿದ್ಯಾರ್ಥಿಗಳಿಗೆ ಕೊಟ್ಟಿದ್ದಾರೆ. ಈ ವಿದ್ಯಾರ್ಥಿಗಳು ವೈದ್ಯಕೀಯ ಕಾಲೇಜುಗಳಿಗೆ ಪ್ರವೇಶ ದೊರಕಿಸಿಕೊಳ್ಳುವ ಪ್ರಾರಂಭದಲ್ಲಿ ಮಿತ್ರಾರವರ ಪರೀಕ್ಷೆಗಳನ್ನು ತೆಗೆದುಕೊಂಡಿದ್ದಾರೆ. ಈ ಪರೀಕ್ಷೆಗಳು ದೇಶದಾದ್ಯಂತ ಕೊಟ್ಟು ಫಲಿತಾಂಶಗಳ ಆಧಾರದ ಮೇಲೆ ಅವು ಸ್ಥಿರವಾದಲ್ಲಿ ಹಿಂದಿನ

ಮನೋವೈಜ್ಞಾನಿಕರು ಪಟ್ಟ ಶ್ರಮ ಸಫಲಕಾರಿಯಾಗುತ್ತಿದೆ ಎಂದು ಹೇಳಬಹುದು. ನಮ್ಮ ದೇಶದ ಮಕ್ಕಳ ಮತ್ತು ವಯಸ್ಕರ ಬುದ್ಧಿಶಕ್ತಿಯನ್ನು ಅಳೆದು ನಿರ್ಧರಿಸಲು ಒಂದು ಸಾಧನ ದೊರಕಿತೆಂದು ನಾವು ಸಂತೋಷಪಡಬಹುದು.

## ಬುದ್ಧಿಶಕ್ತಿಯ ಕೆಲವು ಪರೀಕ್ಷೆಗಳ ಸ್ಥೂಲಪರಿಚಯ

ಬುದ್ಧಿಶಕ್ತಿಯ ಪರೀಕ್ಷೆಗಳನ್ನು ಎರಡು ಭಾಗವಾಗಿ ವಿಂಗಡಿಸಬಹುದು. ಭಾಷೆಯಿಂದ ಕೂಡಿದ ಪರೀಕ್ಷೆಗಳು ಮತ್ತು ಭಾಷಾರಹಿತ ಪರೀಕ್ಷೆಗಳು. ಇವೆರಡರಲ್ಲಿ ಒಂದೊಂದನ್ನು ಮತ್ತೆ ಎರಡು ಭಾಗವಾಗಿ ವಿಂಗಡಿಸಬಹುದು. ವೈಯಕ್ತಿಕ ಪರೀಕ್ಷೆಗಳು ಮತ್ತು ಸಾಮೂಹಿಕ ಪರೀಕ್ಷೆಗಳು. ವ್ಯಕ್ತಿಯ ದೃಷ್ಟಿಯಿಂದ ವೈಯಕ್ತಿಕ ಪರೀಕ್ಷೆಗಳು ಮೇಲಾದರೂ ಹಲವು ಅನುಕೂಲಗಳಿಗೋಸ್ಕರ ಸಾಮೂಹಿಕ ಪರೀಕ್ಷೆಗಳು ಉಪಯುಕ್ತವಾಗಿವೆ. ಇವುಗಳಿಂದ ಕಾಲವನ್ನು ಮಿಗಿಸಬಹುದು. ಹೆಚ್ಚು ಜನರು ಈ ಪರೀಕ್ಷೆಗಳನ್ನು ಕೊಡಲು ಬೇಕಾಗಿರುವುದಿಲ್ಲ. ಹೆಚ್ಚು ಹಣವನ್ನು ಹುಡುಗರ ಬುದ್ಧಿಶಕ್ತಿಯ ಪರೀಕ್ಷೆಗಾಗಿ ವ್ಯಯ ಮಾಡಬೇಕಾಗಿಲ್ಲ. ನಮ್ಮಲ್ಲಿ ಶಿಕ್ಷಣ ಪಡೆದಿರುವ ಮನೋವೈಜ್ಞಾನಿಕರು ತೀರ ಕಡಮೆ ಸಂಖ್ಯೆಯಲ್ಲಿರುವುದರಿಂದ ವೈಯಕ್ತಿಕ ಪರೀಕ್ಷೆಗಳಿಗಿಂತ ಸಾಮೂಹಿಕ ಪರೀಕ್ಷೆಗಳು ಹೆಚ್ಚು ಉಪಯೋಗವಾಗಿರುತ್ತವೆ. ಸಾಮೂಹಿಕ ಪರೀಕ್ಷೆಗಳನ್ನು ಕೊಡಲು ಹೆಚ್ಚು ಶಿಕ್ಷಣದ ಆವಶ್ಯಕತೆ ಇರುವುದಿಲ್ಲ. ಆದರೆ, ಬುದ್ಧಿಶಕ್ತಿಯ ಮಟ್ಟವನ್ನು ಸರಿಯಾಗಿ ತಿಳಿಯಲು ವೈಯಕ್ತಿಕ ಪರೀಕ್ಷೆಗಳು ಉತ್ತಮವಾದುವು.

ವೈಯಕ್ತಿಕ ಮತ್ತು ಸಾಮೂಹಿಕ ಬುದ್ಧಿಶಕ್ತಿ ಪರೀಕ್ಷೆಗಳಲ್ಲಿ

ಹಲವಾರು ಪರೀಕ್ಷೆಗಳಿವೆ. ಅವುಗಳಲ್ಲಿ ಭಾಷೆಯಿಂದ ಕೂಡಿದ ಮತ್ತು ಭಾಷಾರಹಿತವಾದ ಪರೀಕ್ಷೆಗಳಿವೆ. ಡೇವಿಡ್ ವೆಕ್ಸ್ಲರ್ ರವರು ರಚಿಸಿರುವ ಪರೀಕ್ಷೆ ವೈಯಕ್ತಿಕವಾದುದು. ಅದರಲ್ಲಿ ಭಾಷೆ ಮತ್ತು ಭಾಷಾರಹಿತ ಪರೀಕ್ಷೆಗಳಿವೆ. ಈ ಪರೀಕ್ಷೆಯ ಪರಿಚಯವನ್ನು ಮುಂದೆ ಮಾಡಿಕೊಡಲಾಗುವುದು. ಕೆಟೇಲ್ ರವರು ರಚಿಸಿರುವ ಸಾಮೂಹಿಕ ಪರೀಕ್ಷೆಯಲ್ಲಿ ಕೂಡ ಭಾಷೆ ಮತ್ತು ಭಾಷಾರಹಿತ ಪರೀಕ್ಷೆಗಳಿವೆ. ಇದರ ಪರಿಚಯಕ್ಕೆ ಇಲ್ಲಿ ಪ್ರಯತ್ನಪಟ್ಟಿಲ್ಲ. ಈಗ ನಾವು ಮೂರು ಬುದ್ಧಿಶಕ್ತಿಯ ಪರೀಕ್ಷೆಗಳ ಪರಿಚಯವನ್ನು ಮಾಡಿಕೊಳ್ಳಬಹುದು. ಮೊದಲ ನೆಯದಾಗಿ ಭಾಷೆಯಿಂದ ಕೂಡಿದ ಸಾಮೂಹಿಕ ಪರೀಕ್ಷೆ, ಎರಡನೆಯದಾಗಿ ಭಾಷಾರಹಿತ ವೈಯಕ್ತಿಕ ಮತ್ತು ಸಾಮೂಹಿಕ ಪರೀಕ್ಷೆ, ಮೂರನೆಯದಾಗಿ ಭಾಷೆ ಮತ್ತು ಭಾಷಾರಹಿತ ಉಪಪರೀಕ್ಷೆಗಳಿಂದ ಕೂಡಿದ ವೈಯಕ್ತಿಕ ಬುದ್ಧಿಶಕ್ತಿ ಪರೀಕ್ಷೆ. ಈ ಮೂರು ಪರೀಕ್ಷೆಗಳ ಪರಿಚಯವನ್ನು ಬಹಳ ಸ್ಥೂಲವಾಗಿ ಇಲ್ಲಿ ಮಾಡಿಕೊಡಲಾಗುವುದು.

## ೧. ಭಾಷೆಯಿಂದ ಕೂಡಿದ ಬುದ್ಧಿಶಕ್ತಿ ಪರೀಕ್ಷೆ

ಸಾಮೂಹಿಕ ಭಾಷಾ ಪರೀಕ್ಷೆಯ ಆಧಾರದ ಮೇಲೆ ಇದನ್ನು ರಚಿಸಲಾಗಿದೆ. ಆಧುನಿಕ ರೀತಿಯಂತೆ ಈ ಬುದ್ಧಿ ಶಕ್ತಿಯ ಪರೀಕ್ಷೆಯನ್ನು ವಿದ್ಯಾಭಿರುಚಿಯ ಪರೀಕ್ಷೆ ಎಂದು ಕರೆಯಲಾಗಿದೆ. ಬುದ್ಧಿಶಕ್ತಿಯ ನೈಜಸ್ಥಿತಿ ಸರಿಯಾಗಿ ಯಾರಿಗೂ ಗೊತ್ತಿಲ್ಲದಿರುವುದರಿಂದ ಇಂತಹ ಪರೀಕ್ಷೆಗಳನ್ನು ವಿದ್ಯಾಭಿರುಚಿ ಪರೀಕ್ಷೆ (Scholastic aptitude Tests) ಗಳೆಂದು ಇತ್ತೀಚೆಗೆ ಕರೆಯುತ್ತಿದ್ದಾರೆ. ಈ ಪರೀಕ್ಷೆಯನ್ನು ಮೈಸೂರಿನ ಹಲವಾರು

ಪ್ರೌಢ ವಿದ್ಯಾಶಾಲೆಗಳಲ್ಲಿ ಕೊಟ್ಟಿದೆ. ಪರೀಕ್ಷೆಯ ಮಾದರಿ ಪ್ರಶ್ನೆಗಳನ್ನು ಇಲ್ಲಿ ಕೊಡಲಾಗಿದೆ. ಈ ಮಾದರಿ ಪ್ರಶ್ನೆಗಳು ಎಂಟು ಬಗೆಯ ಪ್ರಶ್ನೆಗಳನ್ನು ಒಳಗೊಂಡಿವೆ. ಅವು ಅತಿ ಸುಲಭವಾದ ಮಾದರಿ ಪ್ರಶ್ನೆಗಳು. ಎಲ್ಲಾ ಪ್ರಶ್ನೆಗಳೂ ಅಷ್ಟೇ ಸುಲಭವಾಗಿವೆ ಎಂದು ತಿಳಿಯಬಾರದು. ನಿಯಮಿತ ಕಾಲದಲ್ಲಿ ಪ್ರಶ್ನೆಗಳಿಗೆ ಉತ್ತರವನ್ನು ಉತ್ತರ ಪತ್ರಿಕೆಯಲ್ಲಿ ಗುರುತಿಸ ಬೇಕು. ಪರೀಕ್ಷೆಯಲ್ಲಿ ೯೬ ಪ್ರಶ್ನೆಗಳಿವೆ. ಸರಿಯಾದ ಪ್ರತಿ ಯೊಂದು ಉತ್ತರಕ್ಕೆ ಒಂದು ಅಂಕ ಕೊಡಲಾಗುವುದು.

ಕೆಲವು ಮಾದರಿ ಪ್ರಶ್ನೆಗಳು :

೧. "ಸುಲಭ" ಎಂಬ ಪದಕ್ಕೆ ವಿರುದ್ಧವಾದ ಪದ

(*a*) ವಿಚಿತ್ರ (*b*) ತಪ್ಪು (*c*) ಕಷ್ಟ (*d*) ತೊಡಕು.

೨. "ದಡ್ಡ" ಎಂಬ ಪದಕ್ಕೆ ಸಮಾನಾರ್ಥಕ ಪದ

(*a*) ಹುಚ್ಚ (*b*) ಕಿವುಡ (*c*) ಮೋಸಗಾರ (*d*) ಪೆದ್ದ

೩. ಕೆಳಗೆ ಕೊಟ್ಟಿರುವ ಪದಗಳಲ್ಲಿ ಭಿನ್ನಜಾತಿಯ ಪದ ಯಾವುದು ?

(*a*) ಕೆಂಪು (*b*) ಗೋಡೆ (*c*) ಹಸರು (*d*) ಹಳದಿ.

ಇಲ್ಲಿ ಬಿಟ್ಟಿರುವ ಸ್ಥಳದಲ್ಲಿ ಕೆಳಗೆ ಕೊಟ್ಟಿರುವ ನಾಲ್ಕು ಪದಗಳಲ್ಲಿ ಸರಿಯಾದ ಒಂದು ಪದವನ್ನು ಗುರುತಿಸಿ.

೪. ಜನವರಿ, : ಫೆಬ್ರವರಿ, : ಸೋಮವಾರ :—

(*a*) ಬುಧವಾರ (*b*) ಭಾನುವಾರ (*c*) ಗುರುವಾರ (*d*) ಮಂಗಳವಾರ.

೫. ೧೦, ೯, ೮, ೭, ೬—

ಇಲ್ಲಿ—ಕೊಟ್ಟಿರುವ ಕಡೆ ಬರಬೇಕಾದ ಸಂಖ್ಯೆಯನ್ನು ಗುರುತಿಸಿ

(*a*) ೪ (*b*) ೫ (*c*) ೭ (*d*) ೬

೬. ಸುತ್ತಲೂ ನೀರಿನಿಂದ ಆವರಿಸಲ್ಪಟ್ಟ ಭೂಮಿ :—

(*a*) ಖಂ (*b*) ಜ (*c*) ದ್ವೀ (*d*) ಪ

೭. ಗಜ ಒಂದಕ್ಕೆ ೫. ಆ. ಯಂತೆ ೩ ಗಜ ರಿಬ್ಬನ್ನಿನ ಬೆಲೆಯೇನು ?

(*a*) ೧೨.ಆ. (*b*) ೮.ಆ. (*c*) ೧೫.ಆ. (*d*) ೧೪.ಆ.

೮. ಸಕ್ಕರೆಯನ್ನು—ನಿಂದ ತಯಾರಿಸುತ್ತಾರೆ.

(*a*) ಮರಳು (*b*) ಹಾಲು (*c*) ಬೆಲ್ಲ (*d*) ಕಬ್ಬು.

೯. ಪುಷ್ಪ ಎಂಬ ಪದಕ್ಕೆ ಸಮಾನಾರ್ಥಕ ಪದ

(*a*) ಹೂವು (*b*) ಎಲೆ (*c*) ಜಾಜಿ (*d*) ಬಳ್ಳಿ.

೧೦. ಕೆಳಗೆ ಕೊಟ್ಟಿರುವ ಪದದಲ್ಲಿ ಭಿನ್ನಜಾತಿಯ ಪದ ಯಾವುದು ?

(*a*) ನಾಯಿ, (*b*) ಆನೆ (*c*) ಗುಬ್ಬಚ್ಚಿ (*d*) ಸಿಂಹ.

೧೧. ತಿನ್ನು : ಮಿಠಾಯಿ : : ಕುಡಿ :—

(*a*) ರೊಟ್ಟಿ (*b*) ಬೆಣ್ಣೆ (*c*) ಹಾಲು (*d*) ತುಪ್ಪ

೧೨. ೧, ೩, ೯, ೨೭, ೮೧—

ಇಲ್ಲಿ—ಕೊಟ್ಟಿರುವಕಡೆ ಬರಬೇಕಾದ ಸಂಖ್ಯೆ.

(*a*) ೧೩೫ (*b*) ೨೪೩ (*c*) ೧೯೮ (*d*) ೨೪೧

೧೩. ತಂದೆಯ ಸಹೋದರಿ.

(*a*) ಚಿ. (*b*) ತಾ. (*c*) ದೊ (*d*) ಸೋ

೧೪. ನನ್ನಲ್ಲಿ ಒಂದು ರೂಪಾಯಿ ಇದೆ. ನಾನು ೩ ಆಣೆ ತರಕಾರಿಯನ್ನು, ೨ ಆಣೆಗೆ ಹೂವನ್ನು, ೮ ಆಣೆ ಒಂದು ಕಥೆ ಪುಸ್ತಕವನ್ನು ಕೊಂಡುಕೊಂಡ ಬಳಿ ನನ್ನಲ್ಲಿ ಎಷ್ಟು ಹಣ ಮಿಕ್ಕಿರುತ್ತದೆ ?

(*a*) ೩ ಆ. (*b*) ೫ ಆ. (*c*) ೪ ಆ. (*d*) ೬ ಆ.

೧೫. 'ಕಾಂಗರೂ' ಎಂಬುದು ಒಂದು—

(*a*) ಯಾತ್ರಾಸ್ಥಳ. (*b*) ಪ್ರಾಣಿ. (*c*) ಪರ್ವತ (*d*) ಪಕ್ಷಿ.

೧೬. 'ಮುಂದೆ' ಎಂಬ ಪದಕ್ಕೆ ವಿರುದ್ಧವಾದ ಪ ಯಾವುದು ?

(*a*) ಮೊದಲು (*b*) ಹಿಂದೆ (*c*) ಅಂತ್ಯ (*d*) ಕೊನೆ.

೧೭. ಕೆಳಗೆ ಕೊಟ್ಟಿರುವ ಪದಗಳಲ್ಲಿ ಭಿನ್ನಜಾತಿಯ ಪ ಯಾವುದು ?

(*a*) ಹತ್ತಿ (*b*) ಉಣ್ಣೆ (*c*) ಬಟ್ಟೆ (*d*) ರೇಷ್ಮೆ.

೧೮. ಸೀಸ : ಭಾರ :: ಹತ್ತಿ :—

(*a*) ಬಟ್ಟೆ (*b*) ತೂಕ (*c*) ಬಿಳುಪು (*d*) ಹಗುರ.

೧೯. ೫, ೯, ೧೦, ೧೪, ೧೫,—

(*a*) ೧೯. (*b*) ೧೬. (*c*) ೧೮. (*d*) ೨೦.

೨೦. ಪುಸ್ತಕ, ಬಟ್ಟೆ ಮುಂತಾದುವುಗಳನ್ನು ಹೊಲಿಯಲ ಉಪಯೋಗಿಸುವ ಒಂದು ಸಲಕರಣೆ.

(*a*) ಕ (*b*) ದ (*c*) ಸೂ (*d*) ಬ.

೨೧. ಗಂಟೆಗೆ ೪ ಮೈಲಿ ದೂರ ಪ್ರಯಾಣಮಾಡುವ ಒಂದು ಎತ್ತಿನ ಗಾಡಿಯು ೪೪ ಮೈಲಿ ದೂರ ಪ್ರಯಾಣ ಮಾಡಲು ಎಷ್ಟುಕಾಲ ತೆಗೆದುಕೊಳ್ಳುತ್ತದೆ?
(*a*) ೧೦ ಗಂ. (*b*) ೧೧ ಗಂ. (*c*) ೧೫ ಗಂ. (*d*) ೧೨ ಗಂ.

೨೨. ವಜ್ರಗಳು ದೊರಕುವ ಸ್ಥಳ:—
(*a*) ಮರಗಳು. (*b*) ಸಮುದ್ರ. (*c*) ನದಿಗಳು. (*d*) ಗಣಿಗಳು.

೨೩. 'ಸ್ನೇಹಿತ' ಎಂಬ ಪದಕ್ಕೆ ವಿರುದ್ಧವಾದ ಪದ:—
(*a*) ವೀರ (*b*) ಸೈನಿಕ (*c*) ದ್ವೇಷಿಸುವವನು (*d*) ಶತ್ರು

೨೪. 'ಕಷ್ಟ' ಎಂಬ ಪದಕ್ಕೆ ಸಮಾನಾರ್ಥಕ ಪದ
(*a*) ತೊಂದರೆ (*b*) ಭಯಂಕರ (*c*) ಕಠಿಣ (*d*) ಅಸಾಧಾರಣ.

## ೨ ಭಾಷಾರಹಿತ ಪರೀಕ್ಷೆ

ಇಂಡಿಯಾ ದೇಶದಲ್ಲಿ ಹೆಚ್ಚಾಗಿ ಬಳಸುತ್ತಿರುವ ಸಾಮೂಹಿಕ ಬುದ್ಧಿಶಕ್ತಿಯ ಪರೀಕ್ಷೆ ರೇವನ್‌ರವರು ರಚಿಸಿದ ಪ್ರೋಗ್ರೆಸಿವ್ ಮೆಟ್ರಿಸಿಸ್ ಆಗಿದೆ. ಇದನ್ನು ವೈಯಕ್ತಿಕವಾಗಿ ಆಗಲಿ ಸಾಮೂಹಿಕವಾಗಿ ಆಗಲಿ ಉಪಯೋಗಿಸಬಹುದು. ಇದರಲ್ಲಿ ಎರಡು ಪರೀಕ್ಷೆಗಳಿವೆ. ಒಂದು ಮಕ್ಕಳಿಗಾಗಿ ರಚಿಸಿದ್ದು. ಅಲ್ಲಿ ಕೊಟ್ಟಿರುವ ಆಕೃತಿಗಳು ಬಣ್ಣದಿಂದ ರಚಿಸಿವೆ. ಮತ್ತೊಂದು ವಯಸ್ಕರಿಗೆ ತಯಾರಿಸಿದೆ. ವಯಸ್ಕರಿಗೋಸ್ಕರ ಮಾಡಿದ ಪರೀಕ್ಷೆಯನ್ನು ೧೯೩೮ ನೆಯ ಇಸವಿಯಲ್ಲಿ ಪ್ರಚುರಮಾಡಿದರು. ಅನಂತರ ನಾಲ್ಕುಸಲ ಇದನ್ನು ಮಾರ್ಪಡಿಸಿದರು. ೧೯೫೬ರಲ್ಲಿ ಅಚ್ಚುಹಾಕಿಸಿದ ಪರೀಕ್ಷೆಯಿಂದ ಇಲ್ಲಿ ಕೆಲವು ಪರೀಕ್ಷೆಗಳನ್ನು ನಮೂನೆಗಾಗಿ ಕೊಡಲಾಗಿದೆ. ಈ ಪರೀಕ್ಷೆಯಲ್ಲಿ ಐದು ಭಾಗ

ಗಳಿವೆ. ಒಂದೊಂದು ಭಾಗದಲ್ಲಿಯೂ ಹನ್ನೆರಡು ನಕ್ಷೆಗಳಿವೆ
ಒಂದೊಂದು ನಕ್ಷೆಯಲ್ಲಿಯೂ ಸ್ವಲ್ಪ ಭಾಗವನ್ನು ತೆಗೆದು
ಹಾಕಲಾಗಿದೆ. ಆ ನಕ್ಷೆಯ ಕೆಳಗೆ ಕೆಲವು ಪ್ರತ್ಯೇಕ ಮಾದರಿ
ಗಳನ್ನು ಕೊಡಲಾಗಿದೆ. ಅವುಗಳಲ್ಲಿ ಯಾವುದನ್ನು ನಕ್ಷೆಗೆ
ಜೋಡಿಸಿದರೆ ಸರಿಹೋಗುವುದೋ ಅದನ್ನು ಉತ್ತರ ಪತ್ರಿಕೆ
ಯಲ್ಲಿ ಗುರುತಿಸಬೇಕು. ಪ್ರತಿಯೊಂದು ಭಾಗದಲ್ಲಿಯೂ
ನಕ್ಷೆಗಳು ಕ್ರಮಾನುಸಾರವಾಗಿ ಕಷ್ಟದಿಂದ ಕೂಡಿರುತ್ತವೆ.
ಈ ಪರೀಕ್ಷೆಗೆ ಕಾಲನಿಗದಿ ಅಷ್ಟು ಆವಶ್ಯಕವಾಗಿರುವುದಿಲ್ಲ.
ಆದರೆ ಇದನ್ನು ಪೂರೈಸಲು ಅತಿ ಹೆಚ್ಚುಕಾಲ ತೆಗೆದುಕೊಳ್ಳ
ಬೇಕಾದ ಆವಶ್ಯಕತೆ ಇರುವುದಿಲ್ಲ. ಇಲ್ಲಿಯೂ ಕೂಡ ಸರಿಯಾದ
ಉತ್ತರಕ್ಕೆ ಬಂದು ಅಂಕವನ್ನು ಕೊಡಲಾಗುವುದು. ಎಷ್ಟು
ನಕ್ಷೆಗಳಿಗೆ ಬಿಟ್ಟುಹೋದ ಭಾಗಗಳನ್ನು ಸರಿಯಾಗಿ ಗುರುತಿಸು
ವನೋ ಅಷ್ಟು ಅಂಕಗಳನ್ನು ಒಬ್ಬನು ಪಡೆಯುತ್ತಾನೆ.
ಮೊದಲೆ ನಿರ್ಧರಿಸಿದ ಪ್ರಮಾಣಪಟ್ಟಿಗೆ ಒಬ್ಬನು ಪಡೆದ ಅಂಕ
ಗಳನ್ನು ಹೋಲಿಸಿ ಜನಾಂಗದಲ್ಲಿ ಅವನ ಬುದ್ಧಿಶಕ್ತಿಯ
ಮಟ್ಟವನ್ನು ನಿರ್ಧರಿಸಬಹುದು.

ನಮೂನೆ ನಕ್ಷೆಗಳು :—



## ಭಾಷಾ ಮತ್ತು ಭಾಷಾರಹಿತ ಪರೀಕ್ಷೆಗಳಿಂದ ಕೂಡಿದ ಬುದ್ಧಿಶಕ್ತಿ ಪರೀಕ್ಷೆ

ಡೇವಿಡ್ ವೆಕ್ಸ್‌ಲರ್‌ರವರು ನ್ಯೂಯಾರ್ಕ್ ಪಟ್ಟಣದ ಬೆಲ್ಲೆವ್ಯೂ ಆಸ್ಪತ್ರೆಯ ಮಾನಸಿಕ ಚಿಕಿತ್ಸಾಭಾಗದಲ್ಲಿ ಮನೋವೈಜ್ಞಾನಿಕರಾಗಿ ಕೆಲಸ ಮಾಡುತ್ತಿದ್ದಾರೆ. ಇವರು ರಚಿಸಿದ ಬುದ್ಧಿಶಕ್ತಿ ಪರೀಕ್ಷೆಯನ್ನು ವೆಕ್ಸ್‌ಲರ್ ಬೆಲ್ಲೆವ್ಯೂ ಸ್ಕೇಲ್ ಆಫ್ ಇಂಟೆಲಿಜೆನ್ಸ್ ಎಂದು ಕರೆಯಲಾಗಿದೆ. ಮಕ್ಕಳಿಗಾಗಿ ಒಂದು ಪರೀಕ್ಷೆಯನ್ನು ರಚಿಸಿದ್ದಾರೆ. ಅದನ್ನು 'ವಿಸ್ಕ್' ಎಂದು ಕರೆಯುತ್ತಾರೆ. ವಯಸ್ಕರಿಗಾಗಿ ರಚಿಸಿದ ಪರೀಕ್ಷೆಯನ್ನು ಆರು ವರ್ಷ ವಯಸ್ಸಿನವರಿಂದ ಹಿಡಿದು ೬೦ ವರ್ಷ ವಯಸ್ಸಿನವರ ಬುದ್ಧಿಶಕ್ತಿಯನ್ನಳೆಯಲು ಉಪಯೋಗಿಸಬಹುದು. ಈ ಪರೀಕ್ಷೆಯು ಬಹಳ ಉಪಯುಕ್ತವಾಗಿ ಕಂಡುಬಂದಿರುವುದರಿಂದ ಶಾಲೆಗಳಲ್ಲಿಯೂ, ಔದ್ಯೋಗಿಕ ಸಂಸ್ಥೆಗಳಲ್ಲಿಯೂ, ಮಾನಸಿಕ ಚಿಕಿತ್ಸಾಲಯಗಳಲ್ಲಿಯೂ ವಿಶೇಷವಾಗಿ ಉಪಯೋಗಿಸಲಾಗುತ್ತಿದೆ. ಈ ಪರೀಕ್ಷೆಯನ್ನು ಹೆಚ್ಚು ಶ್ರಮವಹಿಸಿ ವೈಜ್ಞಾನಿಕ ರೀತಿಯಲ್ಲಿ ಸಮರ್ಪಕವಾಗಿ ರಚಿಸಿರುವುದರಿಂದ ಇದರ ಉಪಯುಕ್ತತೆ ಹೆಚ್ಚಾಗಿದೆ.

ಈ ಪರೀಕ್ಷೆಯ ಗುಂಪಿನಲ್ಲಿ ಭಾಷೆಯಿಂದ ಕೂಡಿದ ಆರು ಪರೀಕ್ಷೆಗಳೂ, ಐದು ಭಾಷಾರಹಿತ ಪರೀಕ್ಷೆಗಳೂ ಇವೆ. ಕಾಲವಿದ್ದಲ್ಲಿ ಎಲ್ಲಾ ಪರೀಕ್ಷೆಗಳನ್ನೂ ಕೊಡಬಹುದು. ಇಲ್ಲದಿದ್ದರೆ ಕೆಲವನ್ನು ಕೊಟ್ಟು ಉಳಿದವುಗಳನ್ನು ಬಿಟ್ಟುಬಿಡಬಹುದು. ಯಾವುದನ್ನು ಕೊಡಬಹುದು, ಯಾವುದನ್ನು ಬಿಟ್ಟುಬಿಡಬಹುದು ಎಂಬುದನ್ನು ವೆಕ್ಸ್‌ಲರ್‌ರವರು ತಮ್ಮ ಪುಸ್ತಕದಲ್ಲಿ

ಸೂಚಿಸಿದ್ದಾರೆ. ಪರೀಕ್ಷೆಗಳನ್ನು ಕೊಟ್ಟನಂತರ ಉತ್ತರಗಳನ್ನು ಪರೀಕ್ಷಿಸಿ ಅಂಕಗಳನ್ನು ಕೊಡಬೇಕು. ಈ ಅಂಕಗಳನ್ನು ಪರಿವರ್ತಿಸಿ ಬಂದ ಅಂಕಗಳ ಸಹಾಯದಿಂದ ದೈಹಿಕ ವಯಸ್ಸನ್ನು ಗಣನೆಗೆ ತೆಗೆದುಕೊಂಡು ವೆಕ್ಸ್‌ಲರ್‌ರವರು ತಯಾರಿಸಿರುವ ಬುದ್ಧಿಶಕ್ತಿಯ ಪ್ರಮಾಣಪಟ್ಟಿಯಿಂದ ಒಬ್ಬನ ಬುದ್ಧಿಶಕ್ತಿಯ ಮಟ್ಟವನ್ನು ನಿರ್ಧರಿಸಬಹುದು. ಬುದ್ಧಿಶಕ್ತಿಯ ಪ್ರಮಾಣವನ್ನು ಕಂಡುಹಿಡಿಯುವಾಗ ಭಾಷಾಪರೀಕ್ಷೆಗಳಿಗೂ, ಭಾಷಾರಹಿತ ಪರೀಕ್ಷೆಗಳಿಗೂ, ಬೇರೆಯಾಗಿ ಕಂಡುಹಿಡಿಯಬಹುದು. ಅನಂತರ ಪರೀಕ್ಷೆಗಳ ಮೊತ್ತಕ್ಕೆ ಬುದ್ಧಿಶಕ್ತಿಯ ಪ್ರಮಾಣವನ್ನು ನಿರ್ಧರಿಸಬಹುದು. ವೆಕ್ಸ್‌ಲರ್‌ರವರಿಗೆಸಂಖ್ಯಾಶ್ಯಾಸ್ತ್ರ ಮತ್ತು ಮನಶ್ಯಾಸ್ತ್ರದ ಪರಿಜ್ಞಾನ ಚೆನ್ನಾಗಿ ಇದ್ದುದರಿಂದ ಉತ್ತಮ ಬುದ್ಧಿಶಕ್ತಿಯ ಪರೀಕ್ಷೆಯನ್ನು ರಚಿಸಲು ಸಾಧ್ಯವಾಯಿತು. ಹಲವು ವೇಳೆ ಇವೆರಡರಲ್ಲಿಯೂ ಸರಿಯಾದ ಪರಿಜ್ಞಾನವಿಲ್ಲದವರು ಮನಶ್ಯಾಸ್ತ್ರದ ಪರೀಕ್ಷೆಗಳನ್ನು ಮಾರ್ಪಡಿಸಲು ಮತ್ತು ರಚಿಸಲು ತೊಡಗುತ್ತಾರೆ. ಇದು ತುಂಬಾ ಶೋಚನೀಯವಾದ ಸಂಗತಿ. ವೆಕ್ಸ್‌ಲರ್–ಬೆಲ್ಲೆವ್ಯೂ ಪರೀಕ್ಷೆಗಳಲ್ಲಿ,ವಿಷಯಸಂಗ್ರಹಣ, ಅರ್ಥಗ್ರಹಣ, ಗಣಿತ ಮೀಮಾಂಸ, ಅಂಕಿಗಳ ಜ್ಞಾಪಕಶಕ್ತಿ, ಸಾಮ್ಯಗಳ ಪರೀಕ್ಷೆ ಮತ್ತು ಪದಜ್ಞಾನ ಪರೀಕ್ಷೆ, ಇವು ಭಾಷೆಯಿಂದ ಕೂಡಿದ ಪರೀಕ್ಷೆಗಳಾಗಿವೆ. ಚಿತ್ರಗಳ ಜೋಡಣೆ, ಚಿತ್ರಪೂರ್ಣ, ಪದಾರ್ಥಗಳ ಜೋಡಣೆ, ಘನಾಕೃತಿ ನಿರ್ಮಾಣ (Block Design) ಮತ್ತು ಸಂಕೇತಗಳ ಪರೀಕ್ಷೆ ಇವು ಭಾಷಾರಹಿತ ಪರೀಕ್ಷೆಗಳು. ಇವುಗಳ ಒಂದೊಂದರ ಪರಿಚಯವನ್ನು ಮಾಡಿಕೊಳ್ಳಬಹುದು.

## ವಿಷಯ ಸಂಗ್ರಹಣ ಪರೀಕ್ಷೆ

ಇದರಲ್ಲಿ ಇಪ್ಪತ್ತೈದು ಪ್ರಶ್ನೆಗಳಿವೆ. ಸುಲಭವಾದ ಪ್ರಶ್ನೆಗಳನ್ನು ಮೊದಲಲ್ಲಿಯೂ, ಉತ್ತರಿಸಲು ಕಷ್ಟವಾದ ಪ್ರಶ್ನೆಗಳನ್ನು ಆಮೇಲೆಯೂ ಕೊಡಲಾಗಿದೆ. ಪ್ರಾರಂಭದಲ್ಲಿಯೇ ಕಷ್ಟಕರವಾದ ಪ್ರಶ್ನೆಗಳನ್ನು ಕೊಟ್ಟರೆ, ಪರೀಕ್ಷೆಯನ್ನು ತೆಗೆದುಕೊಳ್ಳುವವರು ಹೆದರುವರೆಂಬ ದೃಷ್ಟಿಯಿಂದಲೂ, ಮತ್ತು ಈ ಪರೀಕ್ಷೆಗಳನ್ನು ಮಕ್ಕಳಿಗೆ ಕೊಡುವ ಉದ್ದೇಶದಿಂದಲೂ ಪ್ರತಿಯೊಂದು ಪರೀಕ್ಷೆಯ ಅಂಶಗಳನ್ನು ಕ್ರಮಾನುಸಾರಣೆಯಾಗಿ ಸುಲಭದಿಂದ ಬರಬರುತ್ತಾ ಕಷ್ಟವಾಗಿರುವಂತೆ ರಚಿಸಿರುತ್ತಾರೆ. ಉದಾಹರಣೆ :

(*a*) ಅಮೆರಿಕಾ ದೇಶದ ಈಗಿನ ಅಧ್ಯಕ್ಷನಾರು ?
(೧) ಇವನ ಹಿಂದೆ ಇದ್ದ ಅಧ್ಯಕ್ಷನ ಹೆಸರೇನು ?
(೨) ಉಷ್ಣಮಾಪಕ ಯಂತ್ರವೆಂದರೇನು ?
(೮) ಜಪಾನಿನ ರಾಜಧಾನಿ ಯಾವುದು ?
(೧೦) ಏರೋಪ್ಲೇನನ್ನು ಯಾರು ಕಂಡುಹಿಡಿದರು ?
(೧೨) ಪ್ಯಾರಿಸ್ಸಿನಿಂದ ನ್ಯೂಯಾರ್ಕಿಗೆ ಎಷ್ಟುದೂರ ?
(೧೫) ಅಮೇರಿಕಾದ ಜನಸಂಖ್ಯೆ ಎಷ್ಟು ?
(೨೩) ಹೇಬಿಯಸ್ ಕಾರ್ಪಸ್ ಎಂದರೇನು ?
(೨೫) ಅಪೋಕ್ರಿಫ಼ ಎಂದರೇನು ? ಇತ್ಯಾದಿ.

## ಅರ್ಥಗ್ರಹಣ ಪರೀಕ್ಷೆ

ಈ ಪರೀಕ್ಷೆಯಲ್ಲಿ ಹತ್ತು ಸಂದರ್ಭಗಳನ್ನು ಸೂಚಿಸಲಾಗಿದೆ. ಉತ್ತರಗಳ ಸಮಂಜಸತ್ವವನ್ನು ನೋಡಿ ಅಂಕಗಳನ್ನು ಕೊಡಬೇಕು. ಇದನ್ನು ವೆಕ್ಸ್ಲರ್‌ರವರೇ ನಿರ್ಧರಿಸಿದ್ದಾರೆ.

೧. ದಾರಿಯಲ್ಲಿ ಒಂದು ಅಂಟಿಸಿದ ಲಕ್ಕೋಟೆಯು ನಿನಗೆ ಸಿಗುತ್ತದೆ. ಅದರ ಮೇಲೆ ಹೊಸ ಸ್ಟಾಂಪನ್ನು ಅಂಟಿಸಿದೆ ಮತ್ತು ವಿಳಾಸ ಬರೆದಿದೆ. ಆಗ ನೀನು ಏನುಮಾಡುವೆ?

೨. ಚಲನಚಿತ್ರವನ್ನು ನೋಡುತ್ತಿರುವಾಗ ಅಕಸ್ಮಾತ್ತಾಗಿ ಚಲನಚಿತ್ರ ಮಂದಿರದಲ್ಲಿ ಒಂದು ಕಡೆ ಬೆಂಕಿ ಹೊತ್ತಿಕೊಂಡು ಉರಿಯುತ್ತಿರುವುದನ್ನು ನೀನು ಮೊದಲು ನೋಡುವೆ. ಆಗ ನೀನು ಏನು ಮಾಡಬೇಕು?

೭. ದಟ್ಟವಾದ ಕಾಡಿನಲ್ಲಿ ಹಗಲು ಹೊತ್ತಿನಲ್ಲಿ ಹೋಗುತ್ತಿರುವಾಗ ನಿನಗೆ ದಾರಿತಪ್ಪಿ ಹೋಗುತ್ತದೆ. ಆಗ ನೀನು ಹೇಗೆ ದಾರಿಯನ್ನು ಹುಡುಕಿಕೊಂಡು ಹೋಗುವೆ?

೧೦. ಹುಟ್ಟು ಕಿವುಡರಿಗೆ ಏಕೆ ಸಾಧಾರಣವಾಗಿ ಮಾತನಾಡಲು ಆಗುವುದಿಲ್ಲ?

## ಗಣಿತ ಮೀಮಾಂಸ

ಹತ್ತು ಲೆಕ್ಕಗಳನ್ನು ಇಲ್ಲಿ ಕೊಡಲಾಗಿದೆ. ಒಂದೊಂದನ್ನು ನಿಗದಿಯಾದ ವೇಳೆಯಲ್ಲಿ ಉತ್ತರಿಸಬೇಕು. ನಿಗದಿಯಾದ ವೇಳೆಯನ್ನು ಲೆಕ್ಕಗಳ ಕೊನೆಯಲ್ಲಿ ಕೊಟ್ಟಿದೆ.

(೧) ನಾಲ್ಕು ಮತ್ತು ಐದು ಡಾಲರ್‌ಗಳ ಮೊತ್ತ ಎಷ್ಟು? (೧೫ ಸೆಕೆಂಡುಗಳು)

(೫) ಗಂಟೆಗೆ ೩ ಮೈಲಿಯಂತೆ ಒಬ್ಬನು ಎಷ್ಟು ಗಂಟೆಗಳ ಕಾಲ ಇಪ್ಪತ್ತು ನಾಲ್ಕು ಮೈಲಿಗಳನ್ನು ನಡೆಯುತ್ತಾನೆ? (೩೦ ಸೆಕೆಂಡುಗಳು)

(೬) ಒಬ್ಬ ಮನುಷ್ಯನು ಏಳು, ಎರಡು ಸೆಂಟುಗಳ ಸ್ಟಾಂಪ್‌ಗಳನ್ನು ಕೊಂಡು ಗುಮಾಸ್ತನಿಗೆ ಅರ್ಧ

ಡಾಲರನ್ನು ಕೊಟ್ಟರೆ, ಅವನು ಹಿಂದಕ್ಕೆ ಎಷ್ಟು ಚಿಲ್ಲರೆಯನ್ನು ಪಡೆಯಬೇಕಾಗುತ್ತದೆ ? (೧ ನಿಮಿಷ)

(೯) ಒಂದು ರೈಲುಗಾಡಿಯು ಹತ್ತು ಸೆಕೆಂಡುಗಳಲ್ಲಿ ೧೫೦ ಗಜ ಹೋದರೆ, ಐದನೇ ಒಂದು ಭಾಗದ ಸೆಕೆಂಡ್‌ನಲ್ಲಿ ಎಷ್ಟು ಅಡಿಹೋಗಬಲ್ಲದು ? (೨ ನಿಮಿಷ)

## ಅಂಕಗಳ ಜ್ಞಾಪಕ ಶಕ್ತಿ

ಈ ಪರೀಕ್ಷೆಯನ್ನು ಎರಡು ವಿಧವಾಗಿ ಕೊಡಬೇಕು. ಒಂದರಲ್ಲಿ ಪರೀಕ್ಷಕನು ಉಚ್ಚರಿಸಿದ ಹಾಗೆ ಅಂಕಗಳನ್ನು ಬರೆಯಬೇಕು. ೫, ೮, ೨, ಎಂದು ಹೇಳಿದಾಗ ೫, ೮, ೨, ಎಂದೇ ಬರೆಯಬೇಕು. ಎರಡನೆಯ ವಿಧದಲ್ಲಿ ಪರೀಕ್ಷಕನು ಉಚ್ಚರಿಸಿದ ಅಂಕಗಳನ್ನು ಹಿಂದಿರುಗಿಸಿ ಹೇಳಬೇಕು. ೬, ೨, ೯ ಎಂದು ಹೇಳಿದಾಗ ೯, ೨, ೬ ಎಂದು ಬರೆಯಬೇಕು. ಇವೆರಡರ ಸರಿಯಾದ ಉತ್ತರಗಳ ಮೊತ್ತ ಈ ಪರೀಕ್ಷೆಯ ಅಂಕಗಳು.

ಅಂಕಗಳನ್ನು ಹೇಳಿದಂತೆ ಹೇಳುವುದು.

(೩) ೫, ೮, ೨
(೪) ೬, ೪, ೩, ೯
(೫) ೪, ೨, ೭, ೩, ೧
(೯) ೨, ೭, ೫, ೮, ೬, ೨, ೫, ೮, ೪

ಅಂಕಗಳನ್ನು ಹಿಂತಿರುಗಿಸಿ ಹೇಳುವುದು.

(೩) ೬, ೨, ೯
(೪) ೩, ೨, ೭, ೯
(೫) ೧, ೫, ೨, ೮, ೬
(೯) ೯, ೪, ೩, ೭, ೨, ೫, ೮

## ಸಾಮ್ಯಗಳ ಪರೀಕ್ಷೆ

ಎರಡು ವಸ್ತುಗಳನ್ನು ಕೊಟ್ಟು ಅವೆರಡಕ್ಕಿರುವ ಸಾಮ್ಯವನ್ನು ತಿಳಿಸಲು ಕೇಳಬೇಕು. ಕೊಟ್ಟ ಉತ್ತರಗಳನ್ನು ಪೂರ್ವಭಾವಿಯಾಗಿ ರಚಿಸಿರುವ ಉತ್ತರಗಳ ಪಟ್ಟಿಯ ಆಧಾರದ ಮೇಲೆ ಅಂಕಗಳನ್ನು ಕೊಡಬೇಕು. ಉದಾಹರಣೆಗೆ ಕಿತ್ತಲೆ ಮತ್ತು ಬಾಳೆಹಣ್ಣುಗಳಲ್ಲಿ ಕಂಡುಬರುವ ಸಾಮ್ಯವೇನು ಎಂದು ಕೇಳಿದಾಗ ಪರೀಕ್ಷಿಸಲ್ಪಡುವವನು ಅವೆರಡು ಹಣ್ಣುಗಳು ಎಂದು ತಿಳಿಸಬೇಕು.

| | | | |
|---|---|---|---|
| ೨. | ಅಂಗಿ | ಉಡುಪು | |
| ೫. | ವಾರ್ತಾಪತ್ರಿಕೆ | ರೇಡಿಯೋ | |
| ೭. | ಮರ | ಮದ್ಯ | |
| ೧೦. | ಪದ್ಯ | ಪ್ರತಿಮೆ | |
| ೧೨. | ನೊಣ | ಮರ | ಇತ್ಯಾದಿ |

## ಪದಜ್ಞಾನದ ಪರೀಕ್ಷೆ (Vocabulary)

ಇಲ್ಲಿ ನಲವತ್ತೆರಡು ಪದಗಳನ್ನು ಕೊಡಲಾಗಿದೆ. ಅವುಗಳಲ್ಲಿ ಎಷ್ಟು ಪದಗಳ ಅರ್ಥ ಒಬ್ಬನಿಗೆ ತಿಳಿದಿದೆ, ಎಂಬುದನ್ನು ಪತ್ತೆಹಚ್ಚಲು ಇದರಿಂದ ಸಾಧ್ಯ. ಪದಜ್ಞಾನ ಪರೀಕ್ಷೆಗೂ, ಬುದ್ಧಿಶಕ್ತಿ ಪರೀಕ್ಷೆಗಳಿಗೂ ಅತಿನಿಕಟ ಸಂಬಂಧವಿರುವುದರಿಂದ, ಪದಜ್ಞಾನ ಪರೀಕ್ಷೆಯನ್ನು ಇಲ್ಲಿ ಸೇರಿಸಲಾಗಿದೆ. ಶೇಕಡ ಎಷ್ಟು ಜನರಿಗೆ ಪದಗಳ ಅರ್ಥ ತಿಳಿದಿದೆ, ಎಂಬುದರ ಮೇಲೆ ಪದಗಳನ್ನು ಆರಿಸಿಕೊಳ್ಳಲಾಗಿದೆ.

ಕ್ರಮಾನುಸಾರವಾಗಿ ಕ್ಲಿಷ್ಟಪದಗಳನ್ನು ಸೇರಿಸಲಾಗಿದೆ.

೧. ಸೇಬು
೪. ವಜ್ರ
೧೧. ಮೊಳೆ
೧೭. ಗಿಲೋಟಿನ್
೨೦. ನೈಟ್ರೊಗ್ಲಿಸರಿನ್
೩೦. ಹರಾಕಿರಿ ಇತ್ಯಾದಿ

## ಭಾಷಾರಹಿತ ಪರೀಕ್ಷೆಗಳು

ಚಿತ್ರಗಳ ಪೂರ್ಣ ಪರೀಕ್ಷೆ: ಹದಿನೈದು ಚಿತ್ರಗಳನ್ನು ಒಂದಾದ ಮೇಲೊಂದು ತೋರಿಸಬೇಕಾಗಿದೆ. ಪ್ರತಿ ಚಿತ್ರ ದಲ್ಲಿಯೂ ಯಾವುದಾದರೊಂದು ಅಂಶ ಬಿಟ್ಟುಹೋಗಿರುತ್ತದೆ. ಬಿಟ್ಟುಹೋದ ಭಾಗವನ್ನು ಪರೀಕ್ಷಿಸಲ್ಪಡುವವನು ತಿಳಿಸ ಬೇಕು. ೧೫ ರಿಂದ ೨೦ ಸೆಕೆಂಡುಗಳ ಕಾಲಾವಕಾಶ ಪ್ರತಿ ಚಿತ್ರಕ್ಕೂ ಕೊಡಬೇಕು.

| | ಚಿತ್ರಗಳು | ಬಿಟ್ಟು ಹೋದಭಾಗ |
|---|---|---|
| ೧. | ಹುಡುಗಿ | ಮೂಗು |
| ೩. | ಮನುಷ್ಯ | ಕಿವಿ |
| ೬. | ಹಂದಿ | ಬಾಲ |
| ೯. | ಗಡಿಯಾರ | ಮುಳ್ಳು |
| ೧೪. | ಹುಡುಗಿ | ಕಣ್ಣು ಹುಬ್ಬು |

## ಘನಾಕೃತಿ ನಿರ್ಮಾಣ

ಈ ಪರೀಕ್ಷೆಗೆ ೧೬ ಒಂದು ಅಂಗುಲದ ಘನಗಳು ಬೇಕಾಗು ತ್ತವೆ. ಪ್ರತಿಯೊಂದು ಘನಕ್ಕೂ ಒಂದುಕಡೆ ಕೆಂಪು,

ಮತ್ತೊಂದು ಕಡೆ ಹಳದಿ, ಮಗದೊಂದುಕಡೆ ನೀಲಿ, ಮತ್ತೊಂದು ಕಡೆ ಬಿಳುಪು, ಇನ್ನೊಂದು ಕಡೆ ಕೆಂಪು ಮತ್ತು ಬಿಳುಪು, ಮತ್ತೊಂದು ಕಡೆ ನೀಲಿ ಮತ್ತು ಹಳದಿಬಣ್ಣ ಬಳಿದಿರುತ್ತದೆ. ಏಳು ಆಕೃತಿಗಳನ್ನು ಕಾಗದದ ಮೇಲೆ ಬರೆದಿರುತ್ತವೆ. ಕೊಟ್ಟ ಆಕೃತಿಯಂತೆ ಘನಗಳನ್ನು ಜೋಡಿಸಬೇಕು. ಮೊದಲನೆಯ ನಾಲ್ಕು ಆಕೃತಿಗಳ ಒಂದೊಂದಕ್ಕೂ ೭೫ ಸೆಕೆಂಡುಗಳು, ಅನಂತರ ಎರಡು ಆಕೃತಿಗಳ ಪ್ರತಿಯೊಂದಕ್ಕೂ ೧೫೦ ಸೆಕೆಂಡುಗಳು, ಕೊನೆಯದಕ್ಕೆ ೧೯೫ ಸೆಕೆಂಡುಗಳಷ್ಟು ಕಾಲವನ್ನು ಕೊಡಬೇಕು. ನಿಗದಿಯಾದ ಕಾಲಕ್ಕಿಂತ ಕಡಮೆ ಕಾಲದಲ್ಲಿ ಆಕೃತಿಗೆ ಸರಿಯಾಗಿ ಘನಗಳನ್ನು ಜೋಡಿಸಿದಲ್ಲಿ ಹೆಚ್ಚು ಅಂಕಗಳನ್ನು ಕೊಡಬೇಕಾಗುತ್ತದೆ.

## ಚಿತ್ರಗಳ ಜೋಡಣೆ

ಆರು ಸಂದರ್ಭಗಳನ್ನು ಈ ಪರೀಕ್ಷೆಗೆ ಉಪಯೋಗಿಸಲಾಗಿದೆ. ಒಂದೊಂದು ಸಂದರ್ಭವನ್ನು ಮೂರರಿಂದ ಆರು ಚಿತ್ರಗಳವರೆಗೆ ಚಿತ್ರಿಸಿದೆ. ಚಿತ್ರಗಳನ್ನು ಕ್ರಮರಹಿತವಾಗಿ ತೋರಿಸಲಾಗುತ್ತದೆ. ಅವುಗಳನ್ನು ಸರಿಯಾಗಿ ಜೋಡಿಸಿದರೆ ಅವು ಒಂದು ಕಥೆಯ ರೂಪದಲ್ಲಿರುತ್ತವೆ. ಉದಾಹರಣೆಗೆ ಒಂದು ಹಕ್ಕಿಯು ಗೂಡನ್ನು ಕಟ್ಟಿ, ಮೊಟ್ಟೆಯನ್ನು ಇಟ್ಟು, ಅದರ ಮರಿಗೆ ಆಹಾರವನ್ನು ಕೊಡುವ ಒಂದು ಸಂದರ್ಭವನ್ನು ಮೂರು ಚಿತ್ರಗಳಲ್ಲಿ ತೋರಿಸಿದೆ. ಮೊದಲನೆಯ ಚಿತ್ರದಲ್ಲಿ ಹಕ್ಕಿಯು ಗೂಡನ್ನು ಕಟ್ಟುತ್ತದೆ. ಎರಡನೆಯ ಚಿತ್ರದಲ್ಲಿ ಮೊಟ್ಟೆಯನ್ನಿಡುತ್ತದೆ. ಮೂರನೆಯ ಚಿತ್ರದಲ್ಲಿ ಮರಿಗೆ ಆಹಾರವನ್ನು ತಿನ್ನಿಸುತ್ತದೆ. ಈ ಚಿತ್ರಗಳನ್ನು ಅದಲು ಬದಲು

ಮಾಡಿಕೊಟ್ಟು ಸರಿಯಾಗಿ ಜೋಡಿಸುವಂತೆ ತಿಳಿಸಬೇಕು. ಇದನ್ನು ನಿಯಮಿತ ಕಾಲದಲ್ಲಿ ಮಾಡುವಂತೆ ಹೇಳಬೇಕು.

## ಪದಾರ್ಥಗಳ ಜೋಡಣೆ

ಈ ಪರೀಕ್ಷೆಯು ೩ ಉಪಪರೀಕ್ಷೆಗಳಿಂದ ಕೂಡಿದೆ. ಮೊದಲನೆಯದು ಮನುಷ್ಯಾಕೃತಿಯ ಜೋಡಣೆ. ರಟ್ಟಿನಿಂದ ಮಾಡಿದ ಮನುಷ್ಯಾಕೃತಿಯೊಂದನ್ನು ಆರು ಭಾಗಗಳಾಗಿ ಕತ್ತರಿಸಲಾಗಿದೆ-ತಲೆ, ಮುಂಡ, ಎರಡು ಕೈ ಮತ್ತು ಕಾಲುಗಳು. ಇವುಗಳನ್ನು ಎರಡು ನಿಮಿಷದಲ್ಲಿ ಜೋಡಿಸಬೇಕು. ಪರೀಕ್ಷೆಯನ್ನು ಕೊಡುವ ಮೊದಲು ಇದು ಮನುಷ್ಯಾಕೃತಿ ಎಂದು ತಿಳಿಸಬಾರದು. ಎಲ್ಲಾ ಭಾಗಗಳನ್ನೂ ಜೋಡಿಸಿದರೆ ಮನುಷ್ಯಾಕೃತಿ ಆಗುವುದೆಂದು ಗ್ರಹಿಸಿಕೊಂಡು, ಅವುಗಳನ್ನು ಜೋಡಿಸಬೇಕು. ಹೀಗೆಯೇ ಉಳಿದ ಎರಡು ಪರೀಕ್ಷೆಗಳಲ್ಲಿ ವರ್ತಿಸಬೇಕು. ಎರಡನೆಯ ಉಪಪರೀಕ್ಷೆ ಮನುಷ್ಯನ ಮುಖದ ಆಕಾರಕ್ಕೆ (Profile) ಸಂಬಂಧಪಟ್ಟದ್ದು. ರಟ್ಟಿನಿಂದ ಮಾಡಿದ ಮುಖದ ಆಕಾರವನ್ನು ಏಳು ಭಾಗಗಳಾಗಿ ಕತ್ತರಿಸಬೇಕು. ಚೂರುಗಳನ್ನು ಸರಿಯಾಗಿ ಜೋಡಿಸಲು ಕೊಡಬೇಕು. ಈ ಕೆಲಸವನ್ನು ಮೂರು ನಿಮಿಷಗಳಲ್ಲಿ ಮಾಡಬೇಕು. ಮೂರನೆಯ ಉಪಪರೀಕ್ಷೆ ಹಸ್ತಕ್ಕೆ ಸಂಬಂಧಪಟ್ಟದ್ದಾಗಿದೆ. ರಟ್ಟಿನಲ್ಲಿ ಮಾಡಿದ ಹಸ್ತವೊಂದನ್ನು ಏಳು ಭಾಗಗಳಾಗಿ ಗೊತ್ತಾದ ರೀತಿಯಲ್ಲಿ ಕತ್ತರಿಸಬೇಕು. ಆ ಚೂರುಗಳನ್ನು ಜೋಡಿಸಲು ಕೊಡಬೇಕು. ಇದಕ್ಕೆ ನಿಯಮಿತಕಾಲ ಮೂರು ನಿಮಿಷಗಳು. ಈ ಮೂರು ಪರೀಕ್ಷೆಗಳಲ್ಲೂ ಸರಿ ತಪ್ಪುಗಳು ಮತ್ತು ಜೋಡಿಸಲು ತೆಗೆದುಕೊಂಡ ಕಾಲ ಇವುಗಳನ್ನು ಗಮನಿಸಿ ಅಂಕಗಳನ್ನು ಕೊಡಬೇಕು.

## ಅಂಕೆ-ಸಂಕೇತಗಳ ಪರೀಕ್ಷೆ

ಇಲ್ಲಿ ಒಂದರಿಂದ ಒಂಬತ್ತರವರೆಗೆ ಪ್ರತಿಯೊಂದು ಅಂಕಕ್ಕೂ ಒಂದು ಸಂಕೇತ ಕೊಡಲಾಗಿದೆ. ಅಂಕಕ್ಕೂ ಸಂಕೇತಕ್ಕೂ ಸಂಬಂಧ ಕಲ್ಪಿಸಿಕೊಂಡು ಉತ್ತರ ಪತ್ರಿಕೆಯಲ್ಲಿ ಕೊಟ್ಟಿರುವ ಅರವತ್ತೇಳು ಅಂಕಗಳಿಗೆ ಜಾಗ್ರತೆಯಾಗಿ ಸಂಕೇತಗಳನ್ನು ಬರೆಯಬೇಕು. ಒಂಬತ್ತರ ಒಳಗಿರುವ ಅಂಕಗಳನ್ನೇ ಕ್ರಮ ರಹಿತವಾಗಿ ಅರವತ್ತೇಳುಸಲ ಬರೆಯಲಾಗಿದೆ. ಒಂದೂವರೆ ನಿಮಿಷದಲ್ಲಿ ಈ ಪರೀಕ್ಷೆಯನ್ನು ತೆಗೆದುಕೊಳ್ಳಬೇಕು. ವೆಕ್ಸ್‌ಲರ್‌ರವರು ಕೊಟ್ಟಿರುವ ಸಂಕೇತಗಳು ಹೀಗಿವೆ.

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| – | N | ⊐ | L | ⊔ | O | ∧ | × | = |

ಬುದ್ಧಿಶಕ್ತಿ ಪರೀಕ್ಷೆಗಳನ್ನು ರಚಿಸುವಾಗ ಕೆಲವು ವಿಷಯ ಗಳನ್ನು ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಮೊದಲನೆಯ ದಾಗಿ ಪರೀಕ್ಷೆಯು ಸಾಕಾದಷ್ಟು ಅಂಶಗಳಿಂದ ಕೂಡಿರಬೇಕು. ಈ ಅಂಶಗಳು ಬುದ್ಧಿಶಕ್ತಿಯ ಮೂಲತತ್ತ್ವಗಳನ್ನೊಳ ಗೊಂಡಿರಬೇಕು. ಅಂಶಗಳನ್ನು ನಿರ್ಧರಿಸುವಾಗ ಅವುಗಳ ಬುದ್ಧಿವಂತರನ್ನು ದಡ್ಡರಿಂದ ಬೇರ್ಪಡಿಸುತ್ತವೆಯೇ ? ಮತ್ತು ಅವು ಎಷ್ಟು ಕ್ಲಿಷ್ಟವಾಗಿವೆ ಎಂಬುದನ್ನು ಯಾವ ವಯಸ್ಸಿನವ ರಿಗೆ ಪರೀಕ್ಷೆಗಳನ್ನು ರಚಿಸುತ್ತೇವೆಯೋ, ಆ ವಯಸ್ಸಿನವರಿಗೆ ಕೊಟ್ಟು ನಿರ್ಧರಿಸಬೇಕು. ಅನಂತರ ಪರೀಕ್ಷೆಗಳ ಪ್ರಾಮಾಣಿ ಕತೆಯನ್ನು ಕಂಡುಹಿಡಿಯಬೇಕು. ಬುದ್ಧಿಶಕ್ತಿ ಪರೀಕ್ಷೆಗಳು ಬುದ್ಧಿಶಕ್ತಿಯನ್ನು ಮಾತ್ರ ಅಳತೆ ಮಾಡಬೇಕೇ ಹೊರತು ಇತರ ಮಾನಸಿಕ ವೃತ್ತಿಗಳ ಅಳತೆಗೆ ಹೋಗಬಾರದು. ಅದನ್ನು

ನಿರ್ಧರಿಸಲು ಶಾಲಾ ಪರೀಕ್ಷೆಗಳ ಅಂಕಗಳನ್ನಾಗಲಿ, ಉಪಾಧ್ಯಾಯರ ಅಂದಾಜನ್ನಾಗಲಿ ಹುಡುಗರ ವಿಷಯವಾಗಿ ತೆಗೆದುಕೊಂಡು ಇವುಗಳೊಡನೆ ರಚಿಸಲಾಗುತ್ತಿರುವ ಬುದ್ಧಿ ಶಕ್ತಿ ಪರೀಕ್ಷೆಗಳ ಪರಸ್ಪರ ಸಂಬಂಧವನ್ನು ಕಂಡುಹಿಡಿಯ ಬೇಕು. ಅಲ್ಲದೆ, ಇತರ ಬುದ್ಧಿಶಕ್ತಿ ಪರೀಕ್ಷೆಗಳೊಡನೆ ಸಂಬಂಧ ಗೊತ್ತುಮಾಡಬೇಕು. ಅನೇಕ ವೇಳೆ ಪರೀಕ್ಷೆಯ ಅಂಶಗಳ ಅಂತರ ಸಂಬಂಧವನ್ನು ತಿಳಿದು ಪ್ರಾಮಾಣಿಕತೆಯನ್ನು ನಿರ್ಧರಿಸುತ್ತಾರೆ. ಪರೀಕ್ಷೆಯ ಪ್ರಾಮಾಣಿಕತೆ ಹೆಚ್ಚಿದಷ್ಟೂ ಒಳ್ಳೆಯದು.

ಪರೀಕ್ಷೆಯನ್ನು ಎರಡು, ಮೂರು ಸಲ ಅದೇ ಹುಡುಗರಿಗೆ ಕೊಟ್ಟಲ್ಲಿ ಫಲಿತಾಂಶದಲ್ಲಿ ಹೆಚ್ಚು ಬದಲಾವಣೆಯಿರಕೂಡದು. ಇದು ಪರೀಕ್ಷೆಯು ನಂಬಲರ್ಹವಾಗಿದೆ ಎಂಬುದನ್ನು ಸೂಚಿಸು ತ್ತದೆ.

ಬುದ್ಧಿಶಕ್ತಿ ಪರೀಕ್ಷೆಗಳು ಆದಷ್ಟುಮಟ್ಟಿಗೆ ಎಲ್ಲರ ಅನುಭವ ದಲ್ಲಿರುವ ಅಂಶಗಳಿಂದ ಕೂಡಿರಬೇಕು. ಪರೀಕ್ಷಿಸುವ ವಿಧಾನ ದಲ್ಲಿಯೂ, ಉತ್ತರಗಳಿಗೆ ಬೆಲೆಯನ್ನು ನಿರ್ಧರಿಸುವಾಗಲೂ, ವಾಸ್ತವಿಕತೆ (Objectivity) ಯಿಂದ ಕೂಡಿರಬೇಕು. ನಾಡಿನಲ್ಲಿ ಒಬ್ಬನ ಬುದ್ಧಿಶಕ್ತಿಯ ಸ್ಥಾನವನ್ನು ತಿಳಿಯಲು ರಚಿಸುವ ಪರೀಕ್ಷೆಗೆ ಪ್ರಮಾಣ ಸಂಖ್ಯಾಪಟ್ಟಿ (Norms) ಯನ್ನು ಆಯಾ ವಯಸ್ಸಿನ ನೂರಾರು ಮಂದಿಯನ್ನು ಪರೀಕ್ಷಿಸಿ ನಿರ್ಮಿಸಬೇಕು.

## ಬುದ್ಧಿಶಕ್ತಿಯನ್ನು ಕುರಿತ ಹಲವು ಅಂಶಗಳು

ಬುದ್ಧಿಶಕ್ತಿಯ ಪರೀಕ್ಷೆಗಳನ್ನು ಶಾಲೆಯ ವಿದ್ಯಾರ್ಥಿಗಳಿ ಗಾಗಲಿ ಮತ್ತಾರಿಗಾದರಾಗಲಿ ಕೊಟ್ಟಮೇಲೆ, ಪರೀಕ್ಷೆಗೆ

ಒಳಗಾದವರ ಬುದ್ಧಿಶಕ್ತಿಯ ಪ್ರಮಾಣವನ್ನು ನಿರ್ಧರಿಸಬೇಕು. ಇದನ್ನು ನಿರ್ಧರಿಸಲು ಹಲವಾರು ರೀತಿಗಳುಂಟು. ಒಂದನ್ನು ಮಾತ್ರ ಇಲ್ಲಿ ಸೂಚಿಸಬಹುದು. ಬುದ್ಧಿಶಕ್ತಿಯ ಪ್ರಮಾಣವನ್ನು ಕಂಡುಹಿಡಿಯಲು ಮಾನಸಿಕ ವಯಸ್ಸು ಮತ್ತು ದೈಹಿಕ ವಯಸ್ಸು ಅತ್ಯಾವಶ್ಯಕ. ತಂದೆ ತಾಯಿಗಳು ಮಗು ಹುಟ್ಟಿದ ತಾರೀಖನ್ನು ಬರೆದಿಟ್ಟದ್ದಲ್ಲಿ ದೈಹಿಕ ವಯಸ್ಸನ್ನು ಸರಿಯಾಗಿ ತಿಳಿಯಬಹುದು. ಪಾಶ್ಚಿಮಾತ್ಯ ದೇಶಗಳಲ್ಲಿ ದೈಹಿಕ ವಯಸ್ಸನ್ನು ತಿಳಿಯುವುದು ಸುಲಭ. ನಮ್ಮ ದೇಶದಲ್ಲಿ ಬಹುಮಂದಿ ಅವಿದ್ಯಾವಂತರಿರುವುದರಿಂದ ಅವರು ಮಕ್ಕಳು ಹುಟ್ಟಿದ ತಾರೀಖನ್ನು ಇಡುವುದಿಲ್ಲ. ಹಳ್ಳಿಯವರಂತೂ ಮಕ್ಕಳನ್ನು ಶಾಲೆಗೆ ಸೇರಿಸುವಾಗ ಅಂದಾಜಿನ ಮೇಲೆ ವಯಸ್ಸನ್ನು ಕೊಡುತ್ತಾರೆ. ವಿದ್ಯಾವಂತರಲ್ಲಿ ಕೆಲವರು ಉದ್ಯೋಗದ ಮೇಲಿನ ವ್ಯಾಮೋಹದಿಂದ ಸುಳ್ಳು ವಯಸ್ಸನ್ನು ಕೊಡುತ್ತಾರೆ. ನಮ್ಮ ದೇಶದಲ್ಲಿ ಸರಿಯಾದ ದೈಹಿಕ ವಯಸ್ಸು ಸಿಗುವುದು ಕಷ್ಟವಾದುದರಿಂದ ಬುದ್ಧಿಶಕ್ತಿಯ ಪ್ರಮಾಣವನ್ನು ನಿರ್ಧರಿಸಲು ತೊಡಕುಂಟಾಗುತ್ತದೆ. ಈ ತೊಂದರೆಯನ್ನೆದುರಿಸಲು ಬೇರೊಂದು ವಿಧಾನವನ್ನು ಕಂಡುಹಿಡಿಯಬೇಕಾಗುತ್ತದೆ.

ಮಾನಸಿಕ ವಯಸ್ಸನ್ನು ನಿರ್ಧರಿಸಲು ದೈಹಿಕ ವಯಸ್ಸು ಆವಶ್ಯಕವಾಗಿರುತ್ತದೆ. ಹತ್ತು ವರ್ಷದ ಹುಡುಗನು ಹನ್ನೆರಡು ವರ್ಷದ ಮಕ್ಕಳಿಗೆ ರಚಿಸಿದ ಪರೀಕ್ಷೆಗಳಲ್ಲಿ ಉತ್ತೀರ್ಣನಾದರೆ ಅವನ ಮಾನಸಿಕ ವಯಸ್ಸು ಹನ್ನೆರಡು ವರ್ಷಗಳು. ಮಾನಸಿಕ ವಯಸ್ಸನ್ನು ದೈಹಿಕ ವಯಸ್ಸಿನಿಂದ ಭಾಗಿಸಿ ನೂರರಿಂದ ಗುಣಿಸಿದರೆ ಬುದ್ಧಿಲಬ್ಧ, ಅಥವಾ ಬುದ್ಧಿಪ್ರಮಾಣ ಗೊತ್ತಾಗುತ್ತದೆ. ಇಲ್ಲಿಯ ಉದಾಹರಣೆಯಲ್ಲಿ ಬುದ್ಧಿಪ್ರಮಾಣ

[ ಮಾನಸಿಕ ವಯಸ್ಸು / ದೈಹಿಕ ವಯಸ್ಸು $\frac{೧೨}{೧೦} \times ೧೦೦$ ] ೧೨೦ ಆಗಿರುತ್ತದೆ.

ಒಂದುವೇಳೆ ದೈಹಿಕ ವಯಸ್ಸು ಹತ್ತು ವರ್ಷಗಳು. ಮಾನಸಿಕ ವಯಸ್ಸು ಕೂಡ ಹತ್ತುವರ್ಷಗಳಾಗಿದ್ದರೆ, ಆಗ ಬುದ್ಧಿಶಕ್ತಿಯ ಪ್ರಮಾಣ ೧೦೦. ಇದೇ ರೀತಿ ಕೆಲವು ಬುದ್ಧಿಶಕ್ತಿ ಪರೀಕ್ಷೆಗಳಲ್ಲಿ ಬುದ್ಧಿಶಕ್ತಿಯ ಪ್ರಮಾಣವನ್ನು ಕಂಡುಹಿಡಿಯುತ್ತಾರೆ. ಬುದ್ಧಿಶಕ್ತಿಯ ಪ್ರಮಾಣದಲ್ಲಿ ೧೨೦ ಪಡೆದಿರುವವನು ೧೦೦ ಪಡೆದಿರುವವನಿಗಿಂತ ಹೆಚ್ಚು ಬುದ್ಧಿವಂತನಾಗಿರುತ್ತಾನೆ. ಮತ್ತೊಬ್ಬ ಹುಡುಗನ ದೈಹಿಕ ವಯಸ್ಸು ಹತ್ತಾದರೂ ಎಂಟು ವರ್ಷದ ಮಕ್ಕಳಿಗೆ ಗೊತ್ತಾದ ಪರೀಕ್ಷೆಗಳಲ್ಲಿ ಮಾತ್ರ ಉತ್ತೀರ್ಣನಾಗಬಲ್ಲನು. ಅಂತಹವನ ಮಾನಸಿಕ ವಯಸ್ಸು ಎಂಟು ವರ್ಷಗಳು. ಅವನ ಬುದ್ಧಿಶಕ್ತಿಯ ಪ್ರಮಾಣ ೮೦; ಅವನು ಮಂದಬುದ್ಧಿಯವರ ಗುಂಪಿಗೆ ಸೇರುತ್ತಾನೆ.

ಕೆಲವು ಮನೋವೈಜ್ಞಾನಿಕರು ಬುದ್ಧಿಪ್ರಮಾಣವನ್ನು ಸುಲಭವಾಗಿ ತಿಳಿಯಲು ಪಟ್ಟಿಗಳನ್ನು ತಯಾರಿಸಿದ್ದಾರೆ. ಒಬ್ಬನ ದೈಹಿಕ ವಯಸ್ಸು ಮತ್ತು ಪರೀಕ್ಷೆಯಲ್ಲಿ ಅವನು ಪಡೆದ ಅಂಕಗಳು ಗೊತ್ತಾದರೆ ಈ ಪಟ್ಟಿಗಳಿಂದ ನೇರವಾಗಿ ಅವನ ಬುದ್ಧಿಪ್ರಮಾಣವನ್ನು ತಿಳಿಯಬಹುದು. ವೆಕ್ಸ್‌ಲರ್, ಟರ್ಮ್ಯಾ ಮತ್ತು ಇನ್ನು ಕೆಲವರು ಅಂತಹ ಪಟ್ಟಿಗಳನ್ನು ರಚಿಸಿದ್ದಾರೆ.

## ಬುದ್ಧಿಶಕ್ತಿಯ ಬೆಳವಣಿಗೆ

ನಮ್ಮ ದೇಹವು ಬೆಳೆದಂತೆ, ಬುದ್ಧಿಶಕ್ತಿಯೂ ಬೆಳೆಯುತ್ತಾ ಹೋಗುತ್ತದೆ. ದೈಹಿಕ ಶಾಸ್ತ್ರಜ್ಞರ ಪ್ರಕಾರ ದೇಹದ ಬೆಳವಣಿಗೆಯು ಸುಮಾರು ಹುಟ್ಟಿದಾರಭ್ಯ ಅವನ ಇಪ್ಪತ್ತನೆಯ

ವರ್ಷದವರೆಗೂ ಬೆಳೆದು ಅನಂತರ ನಿಂತುಹೋಗುತ್ತದೆ. ಇಪ್ಪತ್ತು ವಯಸ್ಸಾದನಂತರ ಎತ್ತರದ ಬೆಳವಣಿಗೆ ನಿಂತು ಗಾತ್ರದ ಬೆಳವಣಿಗೆ ಕಾಣಬಹುದು. ಹಾಗೆಯೇ ಮನೋವೈಜ್ಞಾನಿಕರ ಪ್ರಕಾರ ಸಾಮಾನ್ಯ ಬುದ್ಧಿಶಕ್ತಿಯುಳ್ಳವನ ಬುದ್ಧಿಶಕ್ತಿ ಬೆಳವಣಿಗೆಯು ೧೫–೧೬ ನೆಯ ವರ್ಷಕ್ಕೆ ನಿಂತುಹೋಗುತ್ತದೆ. ಪ್ರತಿಭಾವಂತರ ಬುದ್ಧಿಶಕ್ತಿ ಬೆಳವಣಿಗೆಯು ೨೦ ವರ್ಷದವರೆಗೂ ಹೋಗಬಹುದು. ಮಂದಬುದ್ಧಿಯುಳ್ಳವರ ಬುದ್ಧಿಶಕ್ತಿಯ ಬೆಳವಣಿಗೆ ೧೩–೧೪ ನೆಯ ವಯಸ್ಸಿಗೆ ನಿಲ್ಲುತ್ತದೆ. ಮಂಕರು, ದಡ್ಡರು, ಅವರ ಬುದ್ಧಿಶಕ್ತಿಯ ಬೆಳವಣಿಗೆ ಹುಟ್ಟಿದ ಕೆಲವು ವರ್ಷಗಳಲ್ಲಿಯೇ ನಿಲ್ಲುತ್ತದೆ. ಕೆಳಗೆ ಕೊಟ್ಟಿರುವ ರೇಖಾಚಿತ್ರ ಪರಿಶೋಧನೆಗಳ ಆಧಾರದ ಮೇಲೆ ರಚಿಸಲಾಗಿದೆ. ಅದು ಬುದ್ಧಿಶಕ್ತಿಯ ಬೆಳವಣಿಗೆಯನ್ನು ನಿರೂಪಿಸುತ್ತದೆ.




ಚಿತ್ರ ೧. ಬುದ್ಧಿಶಕ್ತಿ ಬೆಳವಣಿಗೆಯ ರೇಖಾ ಚಿತ್ರಗಳು (೨–೨೮)

ಹಿಂದಿನ ಪುಟದ ರೇಖಾ ಚಿತ್ರ ತೋರಿಸುವಂತೆ ಸಾಮಾನ್ಯ ಬುದ್ಧಿಶಕ್ತಿಯುಳ್ಳವರಲ್ಲಿ ಬುದ್ಧಿಶಕ್ತಿ ಹುಟ್ಟಿದ ೭–೮ ವರ್ಷಗಳಲ್ಲಿ ಅತಿ ತೀವ್ರವಾಗಿಯೂ ಅನಂತರ ಸಾಧಾರಣವಾಗಿಯೂ ಬೆಳೆದು ಸುಮಾರು ೧೬ ವಯಸ್ಸಿಗೆ ನಿಲ್ಲುವುದು. ಮೇಧಾವಿಗಳಲ್ಲಿ ೧೦–೧೨ ವರ್ಷದವರೆಗೆ ಅತಿ ತೀವ್ರವಾಗಿ ಬೆಳೆದು ಆಮೇಲೆ ೨೦ ರವರೆವಿಗೆ ಸಾಧಾರಣವಾಗಿ ಬೆಳೆದು ನಿಲ್ಲುತ್ತದೆ. ಮಂದ ಬುದ್ಧಿಯುಳ್ಳವರಲ್ಲಿ ೫–೬ ವಯಸ್ಸಿನವರೆಗೆ ಅತಿ ತೀವ್ರವಾಗಿ ಬೆಳೆದು ಅನಂತರ ಸಾಧಾರಣ ಬೆಳವಣಿಗೆಯಿಂದ ಸುಮಾರು ೧೪ ವರ್ಷಕ್ಕೆ ನಿಲ್ಲುತ್ತದೆ. ಮಂಕುಬುದ್ಧಿಯವರಲ್ಲಿ ಮತ್ತು ದಡ್ಡರಲ್ಲಿ, ಹುಟ್ಟಿದ ಕೆಲವು ವರ್ಷಗಳಲ್ಲಿಯೇ ನಿಂತು ಹೋಗುತ್ತದೆ. ಬುದ್ಧಿಶಕ್ತಿಯ ಬೆಳವಣಿಗೆಯಲ್ಲಿ ನಡೆದಿರುವ ಪರಿಶೋಧನೆಗಳಲ್ಲಿ ಗಮನಿಸಬೇಕಾದ ಮುಖ್ಯ ವಿಷಯವೆಂದರೆ ನಾವು ಎಳೆಯ ವಯಸ್ಸಿನ ಮಕ್ಕಳಿಗೆ ಕೊಡಬೇಕಾದ ಗಮನ. ಚಿಕ್ಕ ವಯಸ್ಸಿನ ಮಕ್ಕಳಲ್ಲಿ ಬುದ್ಧಿಶಕ್ತಿ ಅತಿ ತೀವ್ರವಾಗಿ ಬೆಳೆಯುವುದರಿಂದ ಸಮರ್ಪಕವಾದ ಆವರಣವನ್ನು ಮನೆಗಳಲ್ಲಿಯೂ ಮತ್ತು ಶಾಲೆಗಳಲ್ಲಿಯೂ ಅವರಿಗೆ ಒದಗಿಸಬೇಕು. ಅಂತಹ ಆವರಣವು ಅವರ ಬುದ್ಧಿಶಕ್ತಿಯನ್ನು ಪ್ರಚೋದಿಸಿ, ವಿಕಸಿಸುವಂತೆ ಮಾಡುತ್ತದೆ.

ಗೆಸ್ಸೆಲ್, ಬ್ಯೂಲರ್, ಆಂಡರ್‌ಸ‌ನ್, ಗುಡ್‌ಎನಫ್ ಮೊದಲಾದವರು ಮಕ್ಕಳಲ್ಲಿ ಬುದ್ಧಿಶಕ್ತಿಯ ಬೆಳವಣಿಗೆಯನ್ನು ತಮ್ಮ ಪರಿಶೋಧನೆಗಳ ಮೂಲಕ ತಿಳಿಸಿದಂತೆ ವೆಕ್ಸ್‌ಲರ್, ಜೋನ್ಸ್-ಕಾನ್ರಾಡ್ ಮೈಲ್ಸ್ ಮೊದಲಾದವರು, ಯುವಕರು ಮತ್ತು ವಯಸ್ಕರಲ್ಲಿ ಬುದ್ಧಿಶಕ್ತಿಯ ಬೆಳವಣಿಗೆ ಮತ್ತು ಬುದ್ಧಿಶಕ್ತಿಯ ಕ್ಷೀಣತೆಯನ್ನು ಕಂಡುಹಿಡಿದಿದ್ದಾರೆ. ಬುದ್ಧಿಶಕ್ತಿ ಮತ್ತು

ವಯಸ್ಸು ಇವುಗಳಿಗಿರುವ ನಿಕಟ ಸಂಬಂಧವನ್ನು ತಿಳಿಯು
ವಾಗ ಈ ಅಂಶಗಳು ಹೊರಬಿದ್ದಿವೆ.




ಚಿತ್ರ ೨. ವಯಸ್ಸು ಮತ್ತು ಬುದ್ಧಿಶಕ್ತಿಯ ಕ್ಷೀಣತೆ (೧–೨೮೫)

ದೈನಂದಿನ ಜೀವನದಲ್ಲಿ ಹುಟ್ಟು ಬೆಳವಣಿಗೆ ಕ್ಷೀಣತೆ ಮತ್ತು ಸಾವು, ಈ ಕ್ರಮವನ್ನು ಸಸ್ಯ ಜೀವನದಲ್ಲಿ ಮತ್ತು ಪ್ರಾಣಿ ಜೀವನದಲ್ಲಿ ನೋಡುತ್ತಿರುತ್ತೇವೆ. ಇದನ್ನು ದೇಹದ ಮತ್ತು ಮನಸ್ಸಿನ ಬೆಳವಣಿಗೆಯಲ್ಲೂ ಕಾಣಬಹುದು. ಷೇಕ್ಸ್‌ಪಿಯರ್ ಕವಿಯು ಹೇಳಿದಂತೆ ಮುಪ್ಪು ಇಂದ್ರಿಯಗಳನ್ನು ಮಂದ ವನ್ನಾಗಿ ಮಾಡುತ್ತದೆ (Old age obscures senses). ಮನುಷ್ಯನ ದೇಹದ ಮತ್ತು ಮನಸ್ಸಿನ ಚಟುವಟಿಕೆಗಳು ಯೌವನದಲ್ಲಿದ್ದಷ್ಟು ತೀವ್ರವಾಗಿ, ವಯಸ್ಸಾದಂತೆ ಇರು ವುದಿಲ್ಲ. ವಯಸ್ಸಾದಂತೆ ಜನರು ಮರೆವು ಹೆಚ್ಚಾಗುತ್ತಿದೆ ಎಂದು ಹೇಳುತ್ತಾರೆ. ಯಾವುದಾದರೂ ಒಂದು ವಿಷಯದ ಮೇಲೆ ಬಹಳ ಹೊತ್ತು ಯೋಚನೆ ಮಾಡಲು ಆಗುವುದಿಲ್ಲವೆನ್ನುತ್ತಾರೆ.

ಗಣಿತ ಮೊದಲಾದುವುಗಳಲ್ಲಿ ತಮ್ಮ ಅಸಾಮರ್ಥತೆಯನ್ನು ಒಪ್ಪಿಕೊಳ್ಳುತ್ತಾರೆ. "you cannot teach an old man new tricks" ವಯಸ್ಸಾದವನಿಗೆ ಹೊಸ ವಿಷಯಗಳನ್ನು ಕಲಿಸಲಾಗುವುದಿಲ್ಲ ಎಂಬ ಮಾತಿನಲ್ಲಿ ಸತ್ಯಾಂಶವಿದೆ. ಇಪ್ಪತ್ತೈದರಿಂದ ೩೫ ವರ್ಷದ ೪೫ ಜನ ವಿಶ್ವವಿದ್ಯಾನಿಲಯದ ಅಧ್ಯಾಪಕರಿಗೂ, ೬೦ ರಿಂದ ೮೦ ವರ್ಷ ವಯಸ್ಸಿನ ಪ್ರಾಧ್ಯಾಪಕರಿಗೂ ಮನಶ್ಶಾಸ್ತ್ರದ ಪರೀಕ್ಷೆಗಳನ್ನು ಕೊಟ್ಟಾಗ ಎರಡು ಗುಂಪಿನವರ ಮಧ್ಯೆ ವಯಸ್ಸಿನ ವ್ಯತ್ಯಾಸಕ್ಕಿಂತಲೂ, ಪರೀಕ್ಷೆಗಳ ಫಲಿತಾಂಶದಲ್ಲಿ ಬಹಳ ವ್ಯತ್ಯಾಸ ಕಂಡುಬಂದಿತು (೧,೨೮೫–೮೬).

ವೆಕ್ಸ್ಲರ್‌ರವರ ಪರೀಕ್ಷೆಯಿಂದ ಬುದ್ಧಿಶಕ್ತಿಯ ಕ್ಷೀಣತೆಯನ್ನು ಕಂಡುಹಿಡಿಯಬಹುದು. ಅವರ ಪರೀಕ್ಷೆಯ ಪ್ರಕಾರ ಗಣಿತ ಮೀಮಾಂಸೆ, ಅಂಕಗಳ ಜ್ಞಾಪಕಶಕ್ತಿ, ಅಂಕಸಂಕೇತಗಳ ಪರೀಕ್ಷೆ, ಘನಾಕೃತಿ ನಿರ್ಮಾಣ, ಸಾಮ್ಯಗಳ ಪರೀಕ್ಷೆ, ಚಿತ್ರಗಳ ಜೋಡಣೆ ಇವಕ್ಕೆ ಸಂಬಂಧಪಟ್ಟ ಸಾಮರ್ಥ್ಯ ವಯಸ್ಸಾದ ಹಾಗೆಲ್ಲ ಜಾಗ್ರತೆಯಾಗಿ ಕ್ಷೀಣಿಸುತ್ತದೆ. ವಿಷಯ ಸಂಗ್ರಹಣ, ಅರ್ಥಗ್ರಹಣ, ಪದಾರ್ಥಗಳ ಜೋಡಣೆ, ಚಿತ್ರ ಪೂರ್ಣ, ಶಬ್ದಾರ್ಥ ಪರೀಕ್ಷೆ ಇವುಗಳಿಗೆ ಬೇಕಾಗುವ ನೈಪುಣ್ಯ ನಿಧಾನವಾಗಿ ಕ್ಷೀಣಿಸುತ್ತದೆ. ಇವೆರಡರ ಸಂಬಂಧದ ಮೇಲೆ ಒಬ್ಬನ ಬುದ್ಧಿಶಕ್ತಿಯ ಕ್ಷೀಣತೆಯನ್ನು ಕಂಡುಹಿಡಿಯಲು ಮಾರ್ಗವೊಂದನ್ನು ವೆಕ್ಸ್ಲರ್‌ರವರು ತೋರಿಸಿದ್ದಾರೆ. ಅವರ ಪ್ರಕಾರ ಸಾಮಾನ್ಯವಾಗಿ ಒಬ್ಬನ ಬುದ್ಧಿಶಕ್ತಿಯು ೨೪-೨೫ನೆಯ ವಯಸ್ಸಿಗೆ ಅವನ ಸಾಮರ್ಥ್ಯದ ಶಿಖರವನ್ನು ಮುಟ್ಟಿ ಅನಂತರ ಸಾಧಾರಣವಾಗಿ ಕ್ಷೀಣಿಸುತ್ತಾ ಬಂದು, ೫೦ ನೆಯ ವಯಸ್ಸಾದ ಮೇಲೆ ತೀವ್ರವಾಗಿ ಕ್ಷೀಣಿಸುತ್ತದೆ. ಮಕ್ಕಳ ಮತ್ತು ಯುವಕರ

ಬುದ್ಧಿಶಕ್ತಿಯನ್ನು ಅಳೆಯುವುದು ಎಷ್ಟು ಆವಶ್ಯಕವೋ ವಯಸ್ಕರ ಬುದ್ಧಿಶಕ್ತಿಯ ಕ್ಷೀಣತೆಯನ್ನು ಅಳೆಯುವುದೂ ಅಷ್ಟೇ ಆವಶ್ಯಕ. ಬುದ್ಧಿಶಕ್ತಿಯ ಕ್ಷೀಣತೆ ಕೆಲವರಲ್ಲಿ ಮತ್ತೆ ಕೆಲವರಿಗಿಂತ ಜಾಗ್ರತೆಯಾಗಿ ತಲೆದೋರಬಹುದು. ಇದಕ್ಕೆ ಮುಪ್ಪು, ವ್ಯಸನ, ಕುಡಿತ, ವಿಷಯಲೋಲುಪತೆ, ಬಡತನ, ಮಂದಬುದ್ಧಿ ಇವೇ ಮೊದಲಾದುವುಗಳು ಕಾರಣವಾಗಬಹುದು. ಸ್ವಪ್ರತಿಷ್ಠೆಗೆ ಧಕ್ಕೆ ಬರುವುದೆಂಬ ಆತಂಕದಿಂದ ಕೆಲವರು ಬುದ್ಧಿವಂತರಂತೆ ನಟಿಸಬಹುದು. ಆದರೆ ಅವರು ಮಾಡುವ ಕೆಲಸಗಳಲ್ಲಿ ಬುದ್ಧಿಕ್ಷೀಣತೆ ಚೆನ್ನಾಗಿ ಮನದಟ್ಟಾಗುತ್ತದೆ. ಅಂತಹವರ ಲೋಪದೋಷಗಳನ್ನು ತೋರಿಸಿದರೆ ಕೆಂಡದಂತಾಗುತ್ತಾರೆ. ನಾಡಿನ ಹಿತದೃಷ್ಟಿಯಿಂದ ಅಂತಹವರ ಶಕ್ತಿಗೆ ಸರಿಹೋಗುವ ಕೆಲಸಗಳನ್ನು ಮಾಡಲು ಅವಕಾಶ ಕೊಡಬೇಕೇ ಹೊರತು, ಉನ್ನತ ಉದ್ಯೋಗಗಳಲ್ಲಿ ಅವರನ್ನು ಇದಿರಿಸುವುದು ಶ್ರೇಯಸ್ಕರವಲ್ಲ. 

ಮೊದಲನೆಯ ಮಹಾಯುದ್ಧದಲ್ಲಿ ೧೫,೩೮೫ ಸೈನ್ಯದ ಅಧಿಕಾರಿಗಳ ಬುದ್ಧಿಶಕ್ತಿಯನ್ನು ಅಳೆದದ್ದರ ಫಲಿತಾಂಶವಾಗಿ ಯರ್ಕಿಸ್‌ರವರು ಮುಂದಿನ ಪಟ್ಟಿಯಲ್ಲಿ ತೋರಿಸಿರುವ ಸಂಖ್ಯೆಗಳನ್ನು ಕೊಟ್ಟಿದ್ದಾರೆ.

**ಪಟ್ಟಿ ೧ (೯–೧೬೯)**

| ವಯಸ್ಸು. | ಸರಾಸರಿ ಅಂಕಗಳು. |
|---|---|
| ೨೦ ವರ್ಷಗಳ ಕೆಳಗೆ .... .... | ೧೫೦. |
| ೨೦–೨೪ ವರ್ಷಗಳು .... .... | ೧೪೬. |
| ೨೫–೩೦ ವರ್ಷಗಳು .... .... | ೧೪೩. |

| | | |
|---|---|---|
| ೩೧–೪೦ ವರ್ಷಗಳು | .... .... | ೧೩೩. |
| ೪೧–೫೦ ” | .... .... | ೧೨೫. |
| ೫೧–೬೦ ವರ್ಷಗಳು | .... .... | ೧೨೦. |

ಅರವತ್ತು ವಯಸ್ಸಿನ ಕೆಲವರು ೨೦ ವಯಸ್ಸಿನವರಿಗಿಂತ ಹೆಚ್ಚು ಅಂಕಗಳನ್ನು ಪಡೆದಿರಬಹುದು. ಇಪ್ಪತ್ತು ವಯಸ್ಸಿನ ಕೆಲವರು ೬೦ ವಯಸ್ಸಿನವರಿಗಿಂತ ಕಡಮೆ ಅಂಕಗಳನ್ನು ಹೊಂದಿರಬಹುದು. ಆದರೆ ವಯಸ್ಸಾದ ಹಾಗೆಲ್ಲ ಬುದ್ಧಿಶಕ್ತಿಯ ಕ್ಷೀಣತೆ ಸಾಮಾನ್ಯವಾಗಿ ಕಂಡುಬರುತ್ತದೆ. ಇದು ಪ್ರಕೃತಿಯ ನಿಯಮ.

## ಬುದ್ಧಿ ಪ್ರಮಾಣದ ಸ್ಥಿರತ್ವ

ಗೊತ್ತಾದ ವಯಸ್ಸಿನವರೆಗೂ ಒಬ್ಬನಿಗೆ ವಯಸ್ಸು ಆದ ಹಾಗೆಲ್ಲ ಅವನ ಮಾನಸಿಕ ವಯಸ್ಸು ಹೆಚ್ಚುತ್ತಾ ಹೋಗಬಹುದು. ಆದರೆ ಬುದ್ಧಿ ಪ್ರಮಾಣ ಆದಷ್ಟುಮಟ್ಟಿಗೆ ಸ್ಥಿರವಾಗಿರುತ್ತದೆ. ಒಂದು ವೇಳೆ ವ್ಯತ್ಯಾಸ ಕಂಡುಬಂದಲ್ಲಿ ಅದು ಹೆಚ್ಚಾಗಿರುವುದಿಲ್ಲ, ೧೦-೧೨ ಅಂಕಗಳೊಳಗಾಗಿಯೇ ಇರುತ್ತದೆ. ಈ ವ್ಯತ್ಯಾಸಕ್ಕೆ ವ್ಯಕ್ತಿಯಲ್ಲೇ ಆಗುವ ಬೆಳವಣಿಗೆಗೆ ಸಂಬಂಧಪಟ್ಟ ಬದಲಾವಣೆಗಳು, ಹೆಚ್ಚಾಗಿ ಹೊರಗಿನ ಕಾರಣಗಳು ಮುಖ್ಯವಾಗಿರುತ್ತವೆ. ಹೊರಗಿನ ಕಾರಣಗಳೆಂದರೆ ಪರೀಕ್ಷಕನ ತರಪೇತು, ಪರೀಕ್ಷೆಯ ಅಪೂರ್ಣತ್ವ, ಪರೀಕ್ಷೆಯನ್ನು ಕೊಡುವ ವಿಧಾನ, ಪರೀಕ್ಷೆಯನ್ನು ಪದೇ ಪದೇ ತೆಗೆದುಕೊಳ್ಳುವುದರಿಂದ ಆಗುವ ಅಭ್ಯಾಸ, ವಾತಾವರಣ ಮೊದಲಾದುವು. ಬುದ್ಧಿ ಪ್ರಮಾಣದ ಸ್ಥಿರತ್ವದ ವಿಚಾರವಾಗಿ ಪಿಂಟ್ನರ್‌ರವರು ತಮ್ಮ ಪುಸ್ತಕದಲ್ಲಿ ಹಲವಾರು ಉದಾಹರಣೆ

ಗಳನ್ನು ಕೊಟ್ಟಿದ್ದಾರೆ. ಒಂದನ್ನು ಇಲ್ಲಿ ಸೂಚಿಸಬಹುದು. ಒಂದು ಮಗುವಿಗೆ ಒಂಬತ್ತು ಸಲ ಬೀನೆ ಪರೀಕ್ಷೆಯನ್ನು ಕೊಡಲಾಯಿತು. ಪಟ್ಟಿ ೨ ರಲ್ಲಿ ಅದರ ಫಲಿತಾಂಶ ಕೊಟ್ಟಿದೆ:

**ಪಟ್ಟಿ ೨ (೭-೮೭)**

| ಪರೀಕ್ಷೆ | | ದೈಹಿಕ ವಯಸ್ಸು ವರ್ಷ ತಿಂಗಳು | | ಮಾನಸಿಕ ವಯಸ್ಸು ವರ್ಷ ತಿಂಗಳು | | ಬುದ್ಧಿ ಪ್ರಮಾಣ |
|---|---|---|---|---|---|---|
| ೧ | .... | ೨- ೩ | .... | ೩- ೬ | .... | ೧೫೫ |
| ೨ | .... | ೩- ೧ | .... | ೪- ೬ | .... | ೧೪೬ |
| ೩ | .... | ೪- ೦ | .... | ೫- ೮ | .... | ೧೪೨ |
| ೪ | .... | ೫- ೨ | .... | ೭- ೪ | .... | ೧೪೨ |
| ೫ | .... | ೬- ೦ | .... | ೮- ೬ | .... | ೧೪೨ |
| ೬ | .... | ೭- ೨ | .... | ೯-೧೧ | .... | ೧೩೮ |
| ೭ | .... | ೮- ೨ | .... | ೧೧- ೨ | .... | ೧೩೭ |
| ೮ | .... | ೮-೧೧ | .... | ೧೩- ೦ | .... | ೧೪೬ |
| ೯ | .... | ೧೦- ೦ | .... | ೧೪- ೩ | ... | ೧೪೩ |

ಮೂರು ವರ್ಷದ ಕೆಳಗಿನ ಮಕ್ಕಳಿಗೆ ಕೊಡಲು ಸಾಕಾದಷ್ಟು ಪರೀಕ್ಷೆಗಳು ಬೀನೆಯ ಪರೀಕ್ಷೆಯಲ್ಲಿಲ್ಲವಾದ್ದರಿಂದ ಮೇಲಿನ ಪಟ್ಟಿಯಲ್ಲಿ ಕೊಟ್ಟಿರುವ ಬುದ್ಧಿಪ್ರಮಾಣ ೧೫೫ ನ್ನು ಒಪ್ಪಲು ಸಾಧ್ಯವಿಲ್ಲವೆಂದು ಪಿಂಟ್ನರ್‌ರವರು ಹೇಳಿದ್ದಾರೆ. ಅದನ್ನು ಬಿಟ್ಟರೆ ಅತ್ಯಂತ ಕಡಮೆ ಬುದ್ಧಿ ಪ್ರಮಾಣದ ಸಂಖ್ಯೆ ೧೩೭. ಹೆಚ್ಚಾದ ಸಂಖ್ಯೆ ೧೪೬. ಎಂದರೆ ೯ ಅಂಕಗಳ ವ್ಯತ್ಯಾಸ

ಕಂಡುಬರುತ್ತದೆ. ಹಲವಾರು ಮನೋವೈಜ್ಞಾನಿಕರ ಪರಿಶೋಧನೆಗಳು ಇದನ್ನೇ ಸಮರ್ಥಿಸುತ್ತವೆ.

## ಬುದ್ಧಿಶಕ್ತಿಯ ಪ್ರಸರಣ

ಜನಾಂಗದಲ್ಲಿ ಮನುಷ್ಯರ ಎತ್ತರ, ತೂಕ ಮೊದಲಾದುವುಗಳು ಒಂದು ನಿರ್ದಿಷ್ಟ ರೀತಿಯಲ್ಲಿ ಪ್ರಸರಿಸಿರುತ್ತವೆ. ಹಾಗೆಯೇ ಬುದ್ಧಿಶಕ್ತಿಯೂ ಕೂಡ. ಟರ್ಮನ್, ಥಾಂಪ್ಸನ್, ರಸ್ಕ್, ವೆಕ್ಸಲರ್ ಇನ್ನು ಅನೇಕ ಮನೋವೈಜ್ಞಾನಿಕರು ಸಾವಿರಾರು ಜನ ಮಕ್ಕಳಿಗೆ ಬುದ್ಧಿಶಕ್ತಿ ಪರೀಕ್ಷೆಗಳನ್ನು ಕೊಟ್ಟು ಬುದ್ಧಿಶಕ್ತಿಯ ಪ್ರಸರಣವನ್ನು ತಿಳಿಸಿದ್ದಾರೆ. ಪರೀಕ್ಷೆಗಳ ಫಲಿತಾಂಶವನ್ನು ರೇಖೆಯ ರೂಪದಲ್ಲಿ ಚಿತ್ರಿಸಿದಾಗ ಅದು ಒಂದು ಗಂಟೆಯ




ಚಿತ್ರ ೩ ಬುದ್ಧಿಶಕ್ತಿಯ ಪ್ರಸರಣ (೨—೨೭)

(Bell) ರೂಪವನ್ನು ತಾಳುತ್ತದೆ. ಇದನ್ನು ಆಂಗ್ಲೇಯ ಭಾಷೆಯಲ್ಲಿ ನಾರ್ಮಲ್ ಪ್ರಾಬಬಿಲಿಟಿ ಕರ್ವ್ (Normal Probability Curve) ಎಂದು ಕರೆಯುತ್ತಾರೆ. ರೇಖಾ

ಚಿತ್ರ ೩, ಇದರ ಆಕೃತಿಯನ್ನು ತೋರಿಸುತ್ತವೆ. ಈ ರೇಖಾ ಚಿತ್ರ ಟರ್ಮ್‌ರವರ ಪರಿಶೋಧನೆಗಳ ಆಧಾರದ ಮೇಲೆ ಬರೆದದ್ದಾಗಿದೆ. ಅನೇಕರನ್ನು ಪರೀಕ್ಷೆ ಮಾಡಿದ ಹೊರತು ರೇಖೆಯು ಇಷ್ಟು ಪೂರ್ಣವಾಗಿ ಘಂಟಾಕೃತಿಯಲ್ಲಿರುವುದಿಲ್ಲ.

## ಬುದ್ಧಿ ಪ್ರಮಾಣ

ಚಿತ್ರ ೩ ರಲ್ಲಿ ಕಂಡುಬರುವ ಅಂಶಗಳನ್ನು ಪಟ್ಟಿ ೩ ರಲ್ಲಿ ತಿಳಿಸಲಾಗಿದೆ.

### ಪಟ್ಟಿ ೩

| ಬುದ್ಧಿಪ್ರಮಾಣ | ಶೇಕಡಾಕ್ರಮ | ವಿವರಣೆ |
|---|---|---|
| ೧೪೦ಕ್ಕಿಂತ ಹೆಚ್ಚು | ೦.೨೫ | ಅತಿ ಮೇಧಾವಿಗಳು |
| ೧೨೦-೧೪೦ | ೬.೭೫ | ಮೇಧಾವಿಗಳು |
| ೧೧೦-೧೨೦ | ೧೩.೦೦ | ಹೆಚ್ಚು ಬುದ್ಧಿವಂತರು |
| ೯೦-೧೨೦ | ೬೦.೦೦ | ಸಾಧಾರಣ ಬುದ್ಧಿವಂತರು |
| ೮೦- ೯೦ | ೧೩.೦೦ | ಕಡಮೆ ಬುದ್ಧಿ ವಂತರು |
| ೭೦- ೮೦ | ೬.೦೦ | ಮಂದ ಬುದ್ಧಿ ಯುಳ್ಳವರು |
| ೭೦ಕ್ಕೆ ಕಡಿಮೆ | ೧.೦೦ | ದಡ್ಡರು |

ದಡ್ಡರನ್ನು ೩ ಭಾಗವಾಗಿ ವಿಂಗಡಿಸಬಹುದು—ಮೂಢ, ಮಂಕ, ಹುಟ್ಟುದಡ್ಡ. ಮೂಢರ ಬುದ್ಧಿಪ್ರಮಾಣ ೫೦ ರಿಂದ ೭೦. ಮಂಕರ ಬುದ್ಧಿ ಪ್ರಮಾಣ ೨೦ ರಿಂದ ೫೦ ರ ವರೆಗಿರುತ್ತದೆ. ಹುಟ್ಟು ದಡ್ಡರ ಬುದ್ಧಿಪ್ರಮಾಣ ೨೦ ಕ್ಕಿಂತ ಕಡಮೆ

ಇರುತ್ತದೆ. ಹುಟ್ಟುದಡ್ಡರ ಮಾನಸಿಕ ವಯಸ್ಸು ಎರಡು ವರ್ಷಗಳಿಗಿಂತ ಹೆಚ್ಚಾಗಿರುವುದಿಲ್ಲ. ಇವರ ದೈಹಿಕ ವಯಸ್ಸು ಎಷ್ಟಾದರೂ ಎರಡು ವರ್ಷದ ಮಕ್ಕಳಂತೆ ವರ್ತಿಸುತ್ತಾರೆ. ಮಂಕರು ಮತ್ತು ಹುಟ್ಟುದಡ್ಡರನ್ನು ಎಚ್ಚರಿಕೆಯಿಂದ ಕಾಪಾಡಬೇಕು. ದಿನಚರಿ ಕೆಲಸಗಳನ್ನು ಮಾಡಿಕೊಳ್ಳಲು ಅವರಿಂದ ಆಗುವುದಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಅಂತಹವರಿಗೆ ಪ್ರತ್ಯೇಕ ಗೃಹಗಳಿರುತ್ತವೆ. ಸರ್ಕಾರದವರು ಇಂತಹ ಗೃಹಗಳನ್ನು ನಡಸುತ್ತಾರೆ. ಅಲ್ಲಿ ಅವರಿಗೆ ಪ್ರವೇಶವುಂಟು. ೫೦ ರಿಂದ ೭೦ ಐ. ಕ್ಯು ಇರುವವರಿಗೆ ಅತ್ಯಂತ ಸುಲಭವಾದ ಕೆಲಸಗಳನ್ನು ಮಾಡಲು ಕಲಿಸುತ್ತಾರೆ. ಅವುಗಳಿಂದ ಅವರ ಜೀವನೋಪಾಯವನ್ನು ಸಂಪಾದಿಸಿಕೊಳ್ಳಲು ಸಾಧ್ಯವಾಗುತ್ತದೆ. ಎಂದರೆ ಜನಾಂಗದಲ್ಲಿ ಶೇಕಡ ೬೦ ಜನರು ಸಾಧಾರಣ ಬುದ್ಧಿಶಕ್ತಿಯುಳ್ಳವರಾಗಿರುತ್ತಾರೆ. ಉಳಿದವರಲ್ಲಿ ಅರ್ಧದಷ್ಟು ಹೆಚ್ಚು ಬುದ್ಧಿವಂತರಾಗಿಯೂ ಇನ್ನರ್ಧ ಕಡಮೆ ಬುದ್ಧಿವಂತರಾಗಿಯೂ ಇರುತ್ತಾರೆ. ಪ್ರತಿಯೊಂದು ಜನಾಂಗದಲ್ಲಿಯೂ ಇದೇ ರೀತಿಯ ಬುದ್ಧಿಪ್ರಸರಣೆಯನ್ನು ನಾವು ಕಾಣಬಹುದು.

ವೆಕ್ಸ್‌ಲರ್‌ರವರು ಸಂಖ್ಯಾಶಾಸ್ತ್ರದ ನಿಯಮಗಳನ್ನು ಕಠಿಣವಾಗಿ ಅನುಸರಿಸಿ ಬುದ್ಧಿಶಕ್ತಿಯ ಪ್ರಸರಣೆಯನ್ನು ಪಟ್ಟಿ ೪ ರಲ್ಲಿ ತೋರಿಸಿರುವಂತೆ ತಿಳಿಸಿದ್ದಾರೆ (೧೦-೫೦).

| ಐ. ಕ್ಯು ಪರಿಮಿತಿ | ಶೇಕಡಾಕ್ರಮ | ವಿವರಣೆ |
|---|---|---|
| ೧೨೭ಕ್ಕಿಂತ ಹೆಚ್ಚು | ೨.೨ | ಅತಿ ಮೇಧಾವಿಗಳು |
| ೧೨೦-೧೨೭ | ೬.೭ | ಮೇಧಾವಿಗಳು |
| ೧೧೧-೧೧೯ | ೧೬.೧ | ಹೆಚ್ಚು ಬುದ್ಧಿವಂತರು |

| | | |
|---|---|---|
| ೯೧-೧೧೦ | ೫೦.೦ | ಸಾಧಾರಣ ಬುದ್ಧಿವಂತರು |
| ೮೦- ೯೦ | ೧೬.೧ | ಕಡಮೆ ಬುದ್ಧಿವಂತರು |
| ೬೬- ೭೯ | ೬.೭ | ಮಂದ ಬುದ್ಧಿಯುಳ್ಳವರು |
| ೬೬ಕ್ಕಿಂತ ಕಡಮೆ | ೨.೨ | ದಡ್ಡರು |

ಬೀನೆಯವರ ಪರೀಕ್ಷೆಯ ಪ್ರಕಾರ ಬುದ್ಧಿಪ್ರಮಾಣ ೧೫೦ ರ ಮೇಲೆ ಹೋಗಬಹುದು. ಆದರೆ ವೆಕ್ಸ್‌ಲರ್‌ರವರ ಪರೀಕ್ಷೆಯಲ್ಲಿ ೧೩೦ ರ ಮೇಲೆ ಹೋಗುವುದು ಕಷ್ಟವಾಗಿರುತ್ತದೆ. ಆದ್ದರಿಂದ ಯಾರಾದರಾಗಲಿ ಬುದ್ಧಿಪ್ರಮಾಣವನ್ನು ಹೇಳುವಾಗ ಯಾವ ಪರೀಕ್ಷೆಯಿಂದ ನಿರ್ಧರಿಸಿದ್ದೆಂದು ಹೇಳಿದ ಹೊರತು ಬರಿಸಂಖ್ಯೆಯಿಂದ ಹೆಚ್ಚು ಅರ್ಥವಾಗುವುದಿಲ್ಲ.

## ಬುದ್ಧಿಶಕ್ತಿ ಮತ್ತು ಲಿಂಗ ಭೇದ

ಪ್ರಾರಂಭದಲ್ಲಿ ನಡೆದ ಪರಿಶೋಧನೆಗಳಲ್ಲಿ ಹುಡುಗರ ಮತ್ತು ಹುಡುಗಿಯರ ಬುದ್ಧಿಶಕ್ತಿಯ ಸರಾಸರಿ ಸಂಖ್ಯೆಯನ್ನು ಕಂಡು ಹಿಡಿದಾಗ ಹುಡುಗಿಯರು ತಮ್ಮ ಹದಿನಾಲ್ಕನೆಯ ವಯಸ್ಸಿನ ವರೆಗೂ ಹುಡುಗರಿಗಿಂತ ನಾಲ್ಕು ಐ. ಕ್ಯೂ ಅಂಕಗಳನ್ನು ಜಾಸ್ತಿಯಾಗಿ ಪಡೆಯುತ್ತಿದ್ದರು. ರಸ್ಕರವರು ಸ್ಕಾಂಟ್ಲೆಂಡ್‌ನಲ್ಲಿ ಸ್ಟಾನ್‌ಫರ್ಡ್ ಬೀನೆ ಪರೀಕ್ಷೆಯನ್ನು ಕೊಟ್ಟು ನೋಡಿದಲ್ಲಿ ಹುಡುಗರು ೧೦೦.೫೧ ಐ. ಕ್ಯು ಪಾಯಿಂಟುಗಳನ್ನೂ ಹುಡುಗಿಯರು ೯೯.೭ ಪಾಯಿಂಟುಗಳನ್ನೂ ಪಡೆದಿದ್ದರು. ಇವರಿಬ್ಬರ ಸರಾಸರಿ ಸಂಖ್ಯೆಗಳಲ್ಲಿ ಕಂಡ ವ್ಯತ್ಯಾಸ ಸಂಖ್ಯಾಶಾಸ್ತ್ರದ ದೃಷ್ಟಿಯಿಂದ ಗಮನಾರ್ಹವಾಗಿಲ್ಲ.

ಈಚೀಚೆಗೆ ಬುದ್ಧಿಶಕ್ತಿ ಪರೀಕ್ಷೆಗಳನ್ನು ರಚಿಸುವವರು, ಲಿಂಗಭೇದವನ್ನು ತೋರಿಸುವ ಅಂಶಗಳನ್ನು ಪರೀಕ್ಷೆಯಿಂದ ತೆಗೆದುಹಾಕುತ್ತಾರೆ. ಆದರೆ ಪರಿಶೋಧನೆಗಳ ಫಲವಾಗಿ ಇಷ್ಟನ್ನು ಹೇಳಬಹುದು. ಹುಡುಗಿಯರು ಮತ್ತು ಹೆಂಗಸರು ಭಾಷೆ, ಜ್ಞಾಪಕಶಕ್ತಿ, ಸಂವೇದನೆ, ಕೈಚಳಕದ ಪರೀಕ್ಷೆಗಳಲ್ಲಿ ಹುಡುಗರನ್ನು ಮೀರಿಸುತ್ತಾರೆ. ಹುಡುಗರು ಮತ್ತು ಗಂಡಸರು ಗಣಿತ ಮತ್ತು ಮೆಕ್ಯಾನಿಕಲ್ ಪರೀಕ್ಷೆಗಳಲ್ಲಿ ಹುಡುಗಿಯರು ಮತ್ತು ಹೆಂಗಸರನ್ನು ಮೀರಿಸುತ್ತಾರೆ.

ಕೆಲವು ಮನೋವೈಜ್ಞಾನಿಕರು ಮತ್ತೊಂದು ಸಿದ್ಧಾಂತ ವನ್ನು ಜನರ ಮುಂದೆ ಇಟ್ಟಿದ್ದಾರೆ. ಆ ಸಿದ್ಧಾಂತವನ್ನು ಚಿತ್ರ ೪ ರಲ್ಲಿ ತಿಳಿಯಬಹುದು. (೯-೭೬)




ಚಿತ್ರ ೪. ಗಂಡು ಹೆಣ್ಣುಗಳಲ್ಲಿ ಬುದ್ಧಿಶಕ್ತಿಯ ಪ್ರಸರಣ

ಮೇಲಿನ ಚಿತ್ರವು ಹುಡುಗ ಹುಡುಗಿಯರಲ್ಲಿ ಕಾಣಬರುವ ಬುದ್ಧಿಶಕ್ತಿಯ ವ್ಯತ್ಯಾಸವನ್ನು ತೋರಿಸುತ್ತದೆ. ಗಂಡಸರ ರೇಖೆಯು ಶೃಂಗದ ಮೇಲೆ ತಟ್ಟಿದ ಹಾಗಾಗಿ ವಿಕಾಸವಾಗಿದೆ. ಹೆಂಗಸರ ರೇಖೆಯು ಶೃಂಗದಿಂದ ಕೂಡಿ ಸಂಕುಚಿತವಾಗಿದೆ. ಈ ಸಿದ್ಧಾಂತಿಗಳ ಪ್ರಕಾರ ಹುಡುಗರಲ್ಲಿ ಹುಡುಗಿಯರಿಗಿಂತಲೂ ಪ್ರತಿಭಾವಂತರೂ ದಡ್ಡರೂ ಹೆಚ್ಚಾಗಿರುತ್ತಾರೆ. ನಿರ್ವಿವಾದವಾದ ಎರಡು ಸಂಗತಿಗಳು ಈ ಸಿದ್ಧಾಂತವನ್ನು ಸಮರ್ಥಿಸುತ್ತವೆ. ಮೊದಲನೆಯದಾಗಿ ಪ್ರಖ್ಯಾತರಾದವರಲ್ಲಿ ಗಂಡಸರೇ ಹೆಚ್ಚು ಮಂದಿ ಇರುತ್ತಾರೆ. ಎರಡನೆಯದಾಗಿ ಮಂಕರು ಮತ್ತು ದಡ್ಡರಿಗೋಸ್ಕರ ನಡಸುತ್ತಿರುವ ಮನೆಗಳಲ್ಲಿ ಗಂಡಸರ ಸಂಖ್ಯೆಯೇ ಜಾಸ್ತಿಯಾಗಿರುತ್ತದೆ.

## ಮತ, ಜಾತಿ ಮತ್ತು ಬುದ್ಧಿಶಕ್ತಿ

ಸೋಹನ್‌ಲಾಲ್‌ರವರು ಉತ್ತರ ಪ್ರದೇಶದ ಶಾಲೆಗಳ ಮಕ್ಕಳಿಗೆ ತಾವು ರಚಿಸಿದ ಬುದ್ಧಿಶಕ್ತಿ ಪರೀಕ್ಷೆಯನ್ನು ಕೊಟ್ಟರು. ಹಿಂದೂ ಮತ್ತು ಮುಸಲ್ಮಾನ ಹುಡುಗರ ಬುದ್ಧಿಶಕ್ತಿಯನ್ನು ಹೋಲಿಸಿದಾಗ ಪಟ್ಟಿ ೫ ರಲ್ಲಿ ತೋರಿಸಿದಂತೆ ಕಂಡುಬಂದಿತು.

**ಪಟ್ಟಿ ೫ :** ಮತ ಮತ್ತು ಸರಾಸರಿ ಬುದ್ಧಿಪ್ರಮಾಣ (೨-೬೭)

| ಮತ | | ಸರಾಸರಿ ಐ. ಕ್ಯು. |
|---|---|---|
| ಹಿಂದೂಗಳು | .... | ೧೦೦.೯೭ |
| ಮುಸಲ್ಮಾನರು | .... | ೯೯.೧೯ |

ಪಟ್ಟಿ ೬ : ಜಾತಿ ಮತ್ತು ಸರಾಸರಿ ಬುದ್ಧಿಪ್ರಮಾಣ (೨-೬೮)

| ಜಾತಿ | | ಸರಾಸರಿ ಐ. ಕ್ಯು. |
|---|---|---|
| ಬ್ರಾಹ್ಮಣರು | .... | ೧೦೨.೦೦ |
| ಕಾಯಸ್ಥರು | .... | ೧೦೧.೬೯ |
| ಕ್ಷತ್ರಿಯರು | .... | ೧೦೧.೦೨ |
| ವೈಶ್ಯರು | .... | ೯೯.೨೨ |
| ಶೂದ್ರರು | .... | ೯೫.೪೪ |

ಮೇಲೆ ಕೊಟ್ಟಿರುವ ಎರಡು ಪಟ್ಟಿಗಳು ಸೂಚಿಸುವಂತೆ ಮತ ಮತ್ತು ಜಾತಿಯ ಆಧಾರದ ಮೇಲೆ ಬುದ್ಧಿಶಕ್ತಿಯನ್ನು ನಿರ್ಧರಿಸಲಾಗುವುದಿಲ್ಲ. ಹಿಂದೂಗಳಿಗೂ ಮುಸಲ್ಮಾನರಿಗೂ ಸರಾಸರಿ ಬುದ್ಧಿಪ್ರಮಾಣದಲ್ಲಿ ಖಚಿತವಾದ ವ್ಯತ್ಯಾಸ ಕಂಡು ಬರಲಿಲ್ಲ. ಬ್ರಾಹ್ಮಣರಿಗೂ ಶೂದ್ರರಿಗೂ ಹೋಲಿಸಿದಲ್ಲಿ ೬ ಅಂಕಗಳ ವ್ಯತ್ಯಾಸ ಕಂಡುಬರುತ್ತದೆ. ಈ ೬ ಅಂಕಗಳ ವ್ಯತ್ಯಾಸ ಕಂಡುಬಂದರೂ, ಆ ೨ ಪಂಗಡಗಳ ಒಂದೊಂದರಲ್ಲಿ ಅಧಿಕವಾದ ವಿಸ್ತರಣವಿರುವುದರಿಂದ ಅವೆರಡರ ಸಾಮ್ಯ ಬಹಳಮಟ್ಟಿಗೆ ಒಂದಾಗಿಯೇ ಕಾಣುತ್ತದೆ. ಆದ್ದರಿಂದ ಬ್ರಾಹ್ಮಣರಲ್ಲಿ ಎಷ್ಟು ಜನ ಅತಿ ಬುದ್ಧಿವಂತರು ಸಿಗುತ್ತಾರೋ ಅಷ್ಟೇ ಜನ ಶೂದ್ರರಲ್ಲೂ ಸಿಗುತ್ತಾರೆ. ಹಾಗೆಯೆ ಶೂದ್ರರಲ್ಲಿ ಎಷ್ಟುಜನ ದಡ್ಡರು ಸಿಗುತ್ತಾರೋ ಅಷ್ಟೇಜನ ದಡ್ಡರು ಬ್ರಾಹ್ಮಣರಲ್ಲಿ ಸಿಗುತ್ತಾರೆಂದು ಸೋಹನ್‌ಲಾಲ್‌ರ ಪರಿಶೋಧನೆ ತಿಳಿಸುತ್ತದೆ. ಎಂದರೆ ಬುದ್ಧಿಶಕ್ತಿ ಜಾತಿ, ಮತಗಳಿಗೆ ಕಟ್ಟು ಬಿದ್ದಿಲ್ಲವೆಂದು ಧಾರಾಳವಾಗಿ ಹೇಳಬಹುದು.

## ಆನುವಂಶೀಯತೆ ಮತ್ತು ಬುದ್ಧಿಶಕ್ತಿ

ಬುದ್ಧಿಶಕ್ತಿಯು ಆನುವಂಶಿಕವಾದುದೇ ಅಥವಾ ಆವರಣದ ಫಲವೇ ಎಂಬುದರ ವಿಚಾರವಾಗಿ ವಿಶೇಷ ಜಿಜ್ಞಾಸೆ ನಡೆದಿದೆ. ಕೆಲವರು ಬುದ್ಧಿಶಕ್ತಿ ಆನುವಂಶಿಕವೆಂದೂ ಮತ್ತೆ ಕೆಲವರು ಸಂಪೂರ್ಣವಾಗಿ ಆವರಣದ ಫಲವೆಂದೂ ತಮ್ಮ ವಾದಗಳನ್ನು ಹಲವು ನಿದರ್ಶನಗಳ ಮೂಲಕ ಸಮರ್ಥಿಸುತ್ತಾರೆ. ಇತ್ತೀಚಿನ ಕೆಲವು ವೈಜ್ಞಾನಿಕರು ಆನುವಂಶಿಕತೆ ಮತ್ತು ಆವರಣ ಇವೆರಡಕ್ಕೂ ಪ್ರಾಮುಖ್ಯತೆ ಕೊಡುತ್ತಾರೆ. ಇವರ ವಾದವನ್ನು ಒಂದು ಉಪಮೆಯ ಮೂಲಕ ತಿಳಿಸಬಹುದಾದರೆ, ಒಂದು ಪಾತ್ರೆಯಲ್ಲಿ ನೀರನ್ನು ತರಬೇಕು. ನೀರನ್ನು ಹಿಡಿದಿರಲು ಪಾತ್ರೆಗೆ " ತಳ " ಮತ್ತು " ಪಕ್ಕಗಳು " ಇರಬೇಕು. ತಳವೇ ಆನುವಂಶಿಕ; ಪಕ್ಕಗಳೇ ಆವರಣ. ಪ್ರತಿಯೊಬ್ಬನ ಬುದ್ಧಿಶಕ್ತಿಯೂ ಅವನ ಪಾತ್ರೆಯ ತಳ ಮತ್ತು ಪಕ್ಕಗಳ ಮೇಲೆ ನಿಂತಿರುತ್ತದೆ. ಕೆಲವರ ಪಾತ್ರೆಯ ತಳ ಅಗಲವಿಲ್ಲದೇ ಇರಬಹುದು. ಪಕ್ಕಗಳು ಉದ್ದವಾಗಿದ್ದರೂ ಹೆಚ್ಚು ನೀರು ಹಿಡಿಯುವುದಿಲ್ಲ. ಇನ್ನು ಕೆಲವರ ಪಾತ್ರೆಗಳ ತಳ ಅಗಲವಾಗಿದ್ದು ಪಕ್ಕಗಳು ತೀರ ಮೊಟಕಾಗಿದ್ದರೆ, ಆಗಲೂ ಹೆಚ್ಚು ನೀರು ಇಡಲು ಸಾಧ್ಯವಿಲ್ಲ. ಪಾತ್ರೆಯ ತಳ ಅಗಲವಾಗಿದ್ದು ಪಕ್ಕಗಳು ದೊಡ್ಡದಾಗಿದ್ದರೆ ಹೆಚ್ಚು ನೀರನ್ನು ಇಡಬಹುದು.

ಇವರು ಬುದ್ಧಿಶಕ್ತಿಯನ್ನು ಆನುವಂಶಿಕತೆ × ಆವರಣದ ಗುಣಲಬ್ದವೆಂದು ತಿಳಿಸುತ್ತಾರೆ. ಆನುವಂಶೀಯತೆಯಿಂದ ಬಂದ ಬುದ್ಧಿಶಕ್ತಿ ಒಬ್ಬನಲ್ಲಿ ಹುದುಗಿರುತ್ತದೆ. ಅದು ಪ್ರಕಾಶಮಾನಕ್ಕೆ ಬರಲು ಸರಿಯಾದ ಸನ್ನಿವೇಶಗಳನ್ನು ಆವರಣ ಒದಗಿಸಬೇಕು. ಆಗ ಹುದುಗಿದ್ದ ಬುದ್ಧಿಶಕ್ತಿ, ವಿಕಸಿತವಾಗಿ ಪ್ರಕಾಶಗೊಳ್ಳಲು

ಸಾಧ್ಯವಾಗುತ್ತದೆ. ಇದನ್ನೇ ಥಾಮಸ್ ಗ್ರೇ ಕವಿಯು ತಾನು ಬರೆದ (Elegy) ಎಂಬ ಕವನದಲ್ಲಿ ಹಾಡಿದ್ದಾನೆ. ಒಂದು ಹಳ್ಳಿಯ ಕ್ರೈಸ್ತ ದೇವಾಲಯ. ಆ ದೇವಾಲಯದ ಆವರಣ ದಲ್ಲಿ ಕ್ರೈಸ್ತರ ಗೋರಿಗಳಿವೆ. ಇವುಗಳನ್ನು ನೋಡುತ್ತಾ, ಗ್ರೇ ಕವಿಯು, ಈ ಗೋರಿಗಳಲ್ಲಿ ಸುಪ್ರಸಿದ್ಧ ಕವಿಯಾದ ಮಿಲ್ಟನ್ನಿನಂತಹವರೂ, ಕ್ರಾಂತಿಕಾರನಾದ ಕ್ರಾಮ್‌ವೆಲ್ ನಂತಹವರೂ ಮಲಗಿರಬಹುದು. ಸರಿಯಾದ ವಾತಾವರಣ ವಿಲ್ಲದೆ ಇವರು ಪ್ರಕಾಶಮಾನಕ್ಕೆ ಬಂದಿಲ್ಲದಿರಬಹುದು, ಎಂಬರ್ಥ ಬರುವ ಈತನ ಕವಿತೆಯನ್ನು ಸಾಮಾನ್ಯವಾಗಿ ಆಂಗ್ಲೇಯ ಭಾಷೆಯನ್ನು ತಿಳಿದಿರುವವರೆಲ್ಲರೂ ಓದಿರುತ್ತಾರೆ.

ಅನುವಂಶೀಯತೆಯನ್ನು ಪ್ರತಿಪಾದಿಸುವವರು ಕೊಡುವ ಕೆಲವು ವಾದಗಳ ಸಮರ್ಥನೆಯನ್ನು ಸ್ಥೂಲವಾಗಿ ನಾವು ಗಮನಿಸಬಹುದು. ಕೆಲವು ಕುಟುಂಬಗಳಲ್ಲಿ ಪ್ರತಿಭಾಶಕ್ತಿ ಹರಿಯುತ್ತಿದೆ ಎಂಬ ನಂಬಿಕೆ ಮೊದಲಿನಿಂದ ಇದೆ. ಈ ವಿಧವಾದ ನಂಬಿಕೆಯನ್ನು ಪರೀಕ್ಷಿಸಲು ಇಂಗ್ಲೆಂಡಿನ ಗಾಲ್ಟನ್ ರವರು ಒಂದು ಪರಿಶೋಧನೆ ಕೈಗೊಂಡು ೧೮೬೯ರಲ್ಲಿ "ಹೆರಿಡಿಟರಿ ಜೀನಿಯಸ್" ಎಂಬ ಪುಸ್ತಕವನ್ನು ಪ್ರಚುರಮಾಡಿದರು. ೩೦೦ ಕುಟುಂಬಗಳಿಗೆ ಸೇರಿದ ೯೦೦ ಪ್ರತಿಭಾವಂತರ ವಿಚಾರ ವಾಗಿ ವಿಷಯ ಸಂಗ್ರಹಣೆ ಮಾಡಿದರು. ಪ್ರತಿಭಾವಂತರಾದ ನ್ಯಾಯಾಧೀಶರು, ರಾಜಕಾರಣ ಪಟುಗಳು, ಹೆಸರು ಪಡೆದ ಸೈನ್ಯಾಧಿಕಾರಿಗಳು, ಅತ್ಯುತ್ತಮ ಕವಿಗಳು, ಮತ್ತು ಬರಹಗಾರರು, ವೈಜ್ಞಾನಿಕರು, ಕಲೆಗಾರರು ಇಂತಹವರುಗಳನ್ನು ಮಾತ್ರ ತಮ್ಮ ಪಟ್ಟಿಗೆ ಸೇರಿಸಿಕೊಂಡರು. ತಮ್ಮ ಪರಿಶೋಧ ನೆಯ ಫಲವಾಗಿ ಪ್ರತಿಭಾಶಕ್ತಿಯು ಆಯಾ ಕುಟುಂಬಗಳಲ್ಲಿ

ನಿರೀಕ್ಷಿಸುವುದಕ್ಕಿಂತಲೂ ಹೆಚ್ಚಾಗಿ ಹರಿಯುವ ಸಂಭವವಿದೆ ಎಂಬ ತೀರ್ಮಾನಕ್ಕೆ ಬಂದರು. ಇವರ ತೀರ್ಮಾನವನ್ನು ಸಕಾರಣಗಳಿಂದ ಒಪ್ಪದವರು ಅನೇಕರಿದ್ದಾರೆ.

ಮಂದಬುದ್ಧಿಯು ಕುಟುಂಬಗಳಲ್ಲಿ ಹೇಗೆ ಪ್ರವಹಿಸುತ್ತದೆ, ಎಂಬುದಕ್ಕೆ ಎರಡು ನಿದರ್ಶನಗಳನ್ನು ಕೊಡಬಹುದು. ಡಗ್‌ಡೇಲ್ ಎಂಬುವರು ಜ್ಯೂಕ್ಸ್ ಕುಟುಂಬದ ಕೆಲವು ಸಂತಾನಗಳನ್ನು ಪತ್ತೆಹಚ್ಚಿ ೧೮೭೭ ರಲ್ಲೂ, ಅದೇ ಸಂತತಿಯನ್ನು ಎಸ್ಟಾಬ್ರೂಕ್‌ರವರು ೧೯೧೫ ರವರೆಗೆ ವಿಶದವಾಗಿ ಪರಿಶೀಲಿಸಿ ಕೆಲವು ಅಂಶಗಳನ್ನು ಪ್ರಚುರಪಡಿಸಿದ್ದಾರೆ. ನ್ಯೂಯಾರ್ಕ್‌ಸ್ಟೇಟಿನ ಜೈಲಿನಲ್ಲಿ ಆರು ಜನ ರಕ್ತ ಸಂಬಂಧಿಗಳು ವಾಸಿಸುತ್ತಿದ್ದರು. ಈ ಘಟನೆಯು ಇದೇ ರೀತಿ ಇವರ ರಕ್ತ ಸಂಬಂಧಿಗಳು ಇನ್ನು ಇರಬಹುದೆಂಬ ಸಂದೇಹವನ್ನು ಪ್ರಚೋದಿಸಿ ಇವರ ಕುಟುಂಬದ ಒಂದು ಚರಿತ್ರೆಯನ್ನೆ ತಯಾರಿಸಲಾಯಿತು. ಅದರ ಪ್ರಕಾರ ೭ ತಲೆಮಾರಿನವರೆಗೂ ವಿಷಯಸಂಗ್ರಹಣಮಾಡಿದರು. ಈ ಏಳು ತಲೆಮಾರುಗಳಲ್ಲಿ ೫೪೦ ರಕ್ತ ಸಂಬಂಧಿಗಳನ್ನು ಪತ್ತೆಹಚ್ಚಲಾಯಿತು. ಉಳಿದ ೧೬೯ ಮಂದಿ ಮದುವೆಯಿಂದಾಗಲಿ ಕೂಡುವಳಿಕೆಯಿಂದಾಗಲಿ ಇವರಿಗೆ ಸಂಬಂಧಿಗಳಾಗಿದ್ದರು. ಇಷ್ಟು ಜನರ ಬಡತನ, ಅಪರಾಧ, ಕೆಟ್ಟಕೆಲಸಗಳು, ಕಾಯಿಲೆ ಇತ್ಯಾದಿಗಳಿಗಾಗಿ ಅಮೆರಿಕಾ ಸರ್ಕಾರಕ್ಕೆ ೭೫ ವರ್ಷಗಳಲ್ಲಿ ೧೫ ಲಕ್ಷ ಡಾಲರುಗಳ ವೆಚ್ಚವಾಯಿತಂತೆ. ಜ್ಯೂಕ್ಸ್ ಕುಟುಂಬ ಪ್ರಾರಂಭವಾದುದು ೫ ಜನ ಜ್ಯೂಕ್ಸ್ ಸಹೋದರಿಯರಿಂದ. ಇವರಲ್ಲಿ ಇಬ್ಬರು ಅಮೆರಿಕಾ ದೇಶದಲ್ಲಿ ನೆಲಸಿದ್ದ ಡಚ್‌ದೇಶದ ಮ್ಯಾಕ್ಸ್ ಎಂಬುವನ ಇಬ್ಬರು ಮಕ್ಕಳನ್ನು ಮದುವೆಯಾದಾಗಿ ನಿಂದ ಇವರ ವಂಶವೃಕ್ಷವನ್ನು ಚಿತ್ರಿಸಲಾಗಿದೆ.

ಗಾಡ್ಡರ್ಡ್‌ರವರು ಮತ್ತೊಂದು ಕುಟುಂಬವನ್ನು ಪರಿಶೀಲಿಸಿ ಮಂದಬುದ್ಧಿ ವಂಶಾನುಗತವೆಂದು ತಿಳಿಸುತ್ತಾರೆ. ಮಾರ್ಟಿನ್ ಕಲ್ಲಿಕಾಕ್ ಎಂಬುವನು ಒಳ್ಳೆಯ ಮನೆತನಕ್ಕೆ ಸೇರಿದವನು. ತನ್ನ ೨೧ ನೆಯ ವಯಸ್ಸಿನಲ್ಲಿ ಸೈನ್ಯಕ್ಕೆ ಸೇರಿದನು. ಆ ಸಮಯದಲ್ಲಿ ಮಂದಬುದ್ಧಿಯ ಹುಡುಗಿಯೊಡನೆ ಇವನಿಗೆ ಸಂಬಂಧವಾಯಿತು. ಈ ಸಂಬಂಧದಿಂದ ಒಬ್ಬ ಮಗ ಹುಟ್ಟಿದನು. ಅವನಿಂದ 'ಬುದ್ಧಿಹೀನ' ಸಂತತಿ ಆರಂಭವಾಯಿತು. ೨೩ ನೆಯ ವಯಸ್ಸಿನಲ್ಲಿ ಮಾರ್ಟಿನ್ ಕಲ್ಲಿಕಾಕ್ ತನ್ನ ಆರ್ಥಿಕ ಮಟ್ಟಕ್ಕೆ ಏರುವಂಥ ಒಳ್ಳೆಯವಂಶದ, ಬುದ್ಧಿವಂತೆಯಾದ ಹುಡುಗಿಯೊಬ್ಬಳನ್ನು ಮದುವೆ ಮಾಡಿಕೊಂಡನು. ಅವಳಿಂದ ಒಂದು ಸಂತತಿಯು ಆರಂಭವಾಯಿತು. ಐದು ತಲೆಮಾರಿನವರೆಗೂ ಇವೆರಡು ಸಂತತಿಗಳ ವಿಚಾರವಾಗಿ ಪರಿಶೀಲನೆ ನಡೆಯಿತು. ಒಳ್ಳೆಯ ಹುಡುಗಿಯಿಂದ ಪ್ರಾರಂಭವಾದ ಸಂತತಿಯಲ್ಲಿ ಯೋಗ್ಯರು ಜನಿಸಿ ತಮ್ಮ ಘನತೆ ಗೌರವಗಳನ್ನು ರಕ್ಷಿಸಿಕೊಳ್ಳುತ್ತಿದ್ದರು. ಮಂದಬುದ್ಧಿ ಹುಡುಗಿಯಿಂದ ಪ್ರಾರಂಭಿಸಿದ ಸಂತತಿಯಲ್ಲಿ ಮಂದಬುದ್ಧಿಯಿಂದ ಕೂಡಿದ ಅಯೋಗ್ಯರು ಜನಿಸಿ ದುರ್ವರ್ತನೆಗಳಲ್ಲಿ ತೊಡಗುತ್ತಿದ್ದರು. ಗಾಡ್ಡರ್ಡ್‌ರವರು ಕಲ್ಲಿಕಾಕ್ ಚರಿತ್ರೆಯ ಮೂಲಕ ಅನುವಂಶೀಯತೆಯ ವಿಚಾರವನ್ನು ಒತ್ತಿ ಹೇಳುತ್ತಿದ್ದರೂ, ಬೇರೆ ಬೇರೆ ಕುಟುಂಬಗಳ ವಿಚಾರವಾಗಿ ನಡೆಸಿದ ಅನೇಕ ಪರಿಶೋಧನೆಗಳು ಅನುವಂಶೀಯತೆಯನ್ನು ಪುಷ್ಟೀಕರಿಸುತ್ತಿಲ್ಲ.

'ಅನುವಂಶಿಕ' ಗುಂಪಿನವರು ತಮ್ಮ ತತ್ತ್ವದ ಪ್ರತಿಪಾದನೆಗಾಗಿ ಇನ್ನೂ ಕೆಲವು ಪರಿಶೋಧನೆಗಳನ್ನು ಉದಹರಿಸುವರು. ಅದರಲ್ಲೊಂದು ಮಕ್ಕಳ ರಕ್ತ ಸಂಬಂಧದಲ್ಲಿರುವ ಅಂತರ

ಮತ್ತು ಅವರ ಬುದ್ಧಿಶಕ್ತಿಗಳಲ್ಲಿ ತಲೆದೋರುವ ವ್ಯತ್ಯಾಸಗಳಿಗೆ ಸಂಬಂಧಪಟ್ಟುದಾಗಿದೆ. ವಿಂಗ್‌ಫೀಲ್ಡ್ ಮತ್ತು ಇತರ ವೈಜ್ಞಾನಿಕರ ಪರಿಶೋಧನೆಗಳನ್ನು ಪರಿಶೀಲಿಸಿ ಸ್ಟ್ಯಾಂಡಿಫರ್ಡ್ ರವರು ಪಟ್ಟಿ ೭ ರಲ್ಲಿ (೮–೬೯) ಸೂಚಿಸಿರುವ ಅಂಶಗಳನ್ನು ಕೊಟ್ಟಿದ್ದಾರೆ.

ಪಟ್ಟಿ ೭

| ಗುಂಪುಗಳು | | ಸಂಬಂಧ ಲಬ್ಧ (Co-efficient of correlation) |
|---|---|---|
| ಅನನ್ಯ ಅವಳಿಮಕ್ಕಳು | ... | ೦·೯೦ |
| ಒಂದೇ ಲಿಂಗದ ಅವಳಿಮಕ್ಕಳು | .... | ೦·೮೨ |
| ಬೇರೆ ಬೇರೆ ಲಿಂಗದ ಅವಳಿಮಕ್ಕಳು | .... | ೦·೫೨ |
| ಸಹೋದರ ಸಹೋದರಿಯರು | .... | ೦·೫೦ |
| ದೊಡ್ಡಪ್ಪ ಚಿಕ್ಕಪ್ಪನ ಮಕ್ಕಳು | .... | ೦·೨೭ |
| ರಕ್ತಸಂಬಂಧವಿಲ್ಲದ ಇತರ ಮಕ್ಕಳು | .... | ೦·೦೦ |

ಫಲಿಸಿದ ಪ್ರಜನನ ತತ್ತಿಯು ಎರಡುಭಾಗವಾಗಿ ಒಂದೊಂದು ಭಾಗವು ಒಂದು ಮಗುವಾಗಿ ಬೆಳೆದರೆ ಅನನ್ಯ ಅವಳಿಮಕ್ಕಳು ಹುಟ್ಟುತ್ತಾರೆ. ಈ ಮಕ್ಕಳಿಗೆ ಆನುವಂಶಿಕತೆ ಒಂದೇ ಆಗಿರು ತ್ತದೆ. ಒಂದು ವೇಳೆ ತಾಯಿಯ ಎರಡು ತತ್ತಿಗಳು ತಂದೆಯ ಪ್ರಜನನಕಣಗಳಿಂದ ಫಲಿತವಾಗಿ ಒಂದೊಂದು ತತ್ತಿಯೂ ಒಂದೊಂದು ಮಗುವಿನ ಉತ್ಪತ್ತಿಗೆ ಕಾರಣವಾಗಬಹುದು ಆಗ ಹುಟ್ಟುವ ಮಕ್ಕಳು ಒಂದೇ ಲಿಂಗದವರಾಗಬಹುದು ಅಥವಾ ಬೇರೆ ಬೇರೆ ಲಿಂಗದವರಾಗಬಹುದು. ಈ ಸಾಧಾರಣ ಅವಳಿಮಕ್ಕಳ ಆನುವಂಶಿಕತೆ ಅನನ್ಯ ಅವಳಿ ಮಕ್ಕಳಿಗಿಂತ

ಸ್ವಲ್ಪ ಮಟ್ಟಿಗೆ ಬೇರೆಯಾಗಿರುತ್ತದೆ. ಅನನ್ಯ ಅವಳಿ ಮಕ್ಕಳನ್ನು ಒಂದೇ ಲಿಂಗದ ಅವಳಿ ಮಕ್ಕಳಿಂದ ಪತ್ತೆ ಹಚ್ಚುವುದು ಕಷ್ಟ ವಾಗುತ್ತದೆ. ಸಂಶೋಧಕರು ಈ ಕಷ್ಟವನ್ನು ಮನಗಂಡಿ ದ್ದಾರೆ. ಪಟ್ಟೆ ೭ ರಲ್ಲಿ ಕಾಣುವಂತೆ, ಅನನ್ಯ ಅವಳಿ ಮಕ್ಕಳ ಬುದ್ಧಿಶಕ್ತಿಯನ್ನು ಅಳೆದಾಗ ಪರಸ್ಪರ ಸಂಬಂಧನ ೦·೯೦ ಆಗಿದೆ. ಇದು ಅತ್ಯಂತ ನಿಕಟವಾದ ಸಂಬಂಧವನ್ನು ಸೂಚಿಸುತ್ತದೆ. ಪೂರ್ಣವಾದ ಪರಸ್ಪರ ಸಂಬಂಧವಿದ್ದಲ್ಲಿ ಸಂಬಂಧ ೧.೦ ಆಗಿರುತ್ತದೆ. ಕಿಂಚಿತ್ತಾದರೂ ಸಂಬಂಧವಿಲ್ಲದ ಪಕ್ಷದಲ್ಲಿ ಸಂಬಂಧನ (Co-efficient of Correlation) ೦·೦೦ ಆಗಿರುತ್ತದೆ. ರಕ್ತ ಸಂಬಂಧವಿಲ್ಲದ ಇತರ ಮಕ್ಕಳ ಬುದ್ಧಿ ಶಕ್ತಿಯನ್ನು ಅಳೆದು ಪರಸ್ಪರ ಸಂಬಂಧವನ್ನು ಕಂಡುಹಿಡಿದಾಗ ಸಂಬಂಧನ ೦·೦೦ ಆಗಿರುತ್ತದೆ. ರಕ್ತಸಂಬಂಧ ನಿಕಟ ವಾದಷ್ಟು, ಬುದ್ಧಿಶಕ್ತಿಯಲ್ಲಿ ಸಾಮ್ಯ ಚೆನ್ನಾಗಿ ಕಾಣುತ್ತದೆ. ಇದು ಆನುವಂಶಿಕವಾದವನ್ನು ಪ್ರಬಲಗೊಳಿಸುತ್ತದೆ.

ಸಾಧಾರಣವಾಗಿ ಅನಾಥಾಲಯಗಳಲ್ಲಿ ಒಂದೇ ವಿಧವಾದ ಆವರಣ ಕಂಡುಬರುತ್ತದೆ. ಯಾರಾದರೂ ಇಂತಹ ಗೃಹ ಗಳಿಗೆ ಭೇಟಿ ಕೊಟ್ಟರೆ, ಅಲ್ಲಿನ ಮಕ್ಕಳು ಜೀವನ ನಡೆಯಿಸುವ ಬಗೆ, ಆಹಾರ, ವಿದ್ಯಾಭ್ಯಾಸ, ಅವರ ಬಗ್ಗೆ ಅಧಿಕಾರಿಗಳಿ ಗಿರುವ ತಿರಸ್ಕಾರ ಇವುಗಳಲ್ಲಿ ಸಾಮ್ಯವನ್ನು ಕಾಣಬಹುದು. ಇಲ್ಲಿಯ ಮಕ್ಕಳ ಬುದ್ಧಿಶಕ್ತಿಯನ್ನು ಅಳೆದು ಪರೀಕ್ಷಿಸಿದರೆ ಇತರ ಮಕ್ಕಳ ಬುದ್ಧಿಶಕ್ತಿ ಪ್ರಸರಣದಲ್ಲಿ ಎಷ್ಟು ಅಂತರ ಕಂಡು ಬರುತ್ತದೋ ಅಷ್ಟೇ ಅಂತರ ಅನಾಥ ಮಕ್ಕಳ ಬುದ್ಧಿಶಕ್ತಿಯ ಪ್ರಸರಣದಲ್ಲಿ ಕಂಡುಬಂದಿದೆ. ಒಂದು ವೇಳೆ ಬುದ್ಧಿಶಕ್ತಿಯು ಆವರಣ ಫಲವಾಗಿದ್ದ ಪಕ್ಷದಲ್ಲಿ ಅನಾಥಾಲಯದ ಮಕ್ಕಳ

ಬುದ್ಧಿಶಕ್ತಿ ಒಂದೇ ಮಟ್ಟದ್ದಾಗಿರಬೇಕಾಗಿತ್ತು. ಹಾಗಿಲ್ಲದೆ ವ್ಯತ್ಯಾಸಗಳು ಕಂಡುಬಂದುದರಿಂದ ಆವರಣಕ್ಕಿಂತಲೂ ಆನುವಂಶಿಕತೆ ಪ್ರಧಾನವಾದುದೆಂಬುದು ಇದರಿಂದ ತಿಳಿಯು ತ್ತದೆ.

ಸಿರಿಲ್‌ಬರ್ಟ್‌ರವರು ಇಂಗ್ಲೆಂಡಿನ ಹಲವು ಶಾಲೆಯ ಮಕ್ಕ ಳಿಗೆ ಬುದ್ಧಿಶಕ್ತಿ ಪರೀಕ್ಷೆಗಳನ್ನು ಕೊಟ್ಟರು. ಒಂದು ಪಾಠ ಶಾಲೆಯಲ್ಲಿ (ಇದು ಪ್ರಿಪರೇಟರಿ ಸ್ಕೂಲ್) ಶ್ರೀಮಂತರು ಮತ್ತು ಮೇಧಾವಿಗಳ ಮಕ್ಕಳು ಓದುತ್ತಿದ್ದರು. ಇನ್ನೊಂದು ಶಾಲೆಯಲ್ಲಿ (ಇದು ಎಲಿಮೆಂಟರಿ ಸ್ಕೂಲ್) ವಿಶೇಷವಾಗಿ ಸುತ್ತಮುತ್ತಲಿನ ಸಾಧಾರಣ ವ್ಯಾಪರಸ್ಥರ ಮಕ್ಕಳು ಓದು ತ್ತಿದ್ದರು. ಎರಡು ಪಾಠಶಾಲೆಗಳಲ್ಲಿ ಕೊಡುತ್ತಿದ್ದ ಶಿಕ್ಷಣ ಮಟ್ಟ ಮತ್ತು ವಿಧಾನ ಹೆಚ್ಚುಕಡಮೆ ಒಂದೇರೀತಿ ಆಗಿದ್ದಿತು. ಆದರೆ ಪ್ರಿಪರೇಟರಿ ಪಾಠಶಾಲೆಗಳಲ್ಲಿ ಓದುತ್ತಿದ್ದ ಮಕ್ಕಳು ಬುದ್ಧಿಶಕ್ತಿ ಪರೀಕ್ಷೆಗಳಲ್ಲಿ ಹೆಚ್ಚು ಅಂಕಗಳನ್ನು ಪಡೆದಿದ್ದರು. ಆವರಣ ತಕ್ಕಮಟ್ಟಿಗೆ ಒಂದೇ ಆಗಿದ್ದರೂ ಎರಡು ಪಾಠಶಾಲೆ ಗಳ ಮಕ್ಕಳ ಬುದ್ಧಿಶಕ್ತಿಯಲ್ಲಿ ಅಂತರ ಕಂಡುಬಂದಿತು. ಇದು ಆನುವಂಶಿಕವೆಂದು ಬರ್ಟ್‌ರವರು ಅಭಿಪ್ರಾಯಪಡು ತ್ತಾರೆ.

ಸಂಶೋಧನೆಗಳಲ್ಲಿ ಕಂಡುಬಂದ ಮತ್ತೊಂದು ಅಂಶವನ್ನು ಆನುವಂಶಿಕವಾದದ ಪರವಾಗಿ ಕೊಡಬಹುದು. ಈ ಅಂಶ ವನ್ನು ಸುಪ್ರಸಿದ್ಧ ಆಂಗ್ಲೇಯ ವೈಜ್ಞಾನಿಕರಾದ ಗಾಲ್ಟನ್‌ರವರು ಮನುಷ್ಯರ ಎತ್ತರದ ವಿಚಾರವಾಗಿ ಕಂಡುಹಿಡಿದರು. ಇದರ ಪ್ರಕಾರ ತಂದೆ ಎತ್ತರವಾಗಿದ್ದಲ್ಲಿ ಅವನ ಮಕ್ಕಳು ಎತ್ತರವಾಗಿ ಕಂಡರೂ ಅವರು ತಮ್ಮ ತಂದೆಯ ಎತ್ತರದಷ್ಟಿರುವುದಿಲ್ಲ.

ಮೋಟಾದವರ ಮಕ್ಕಳು ಮೋಟಾಗಿ ಕಂಡರೂ ಅವರ ತಂದೆಯರಷ್ಟು ಮೋಟಾಗಿರುವುದಿಲ್ಲ. ಮಕ್ಕಳ ಎತ್ತರ ದೇಶದ ಜನರ ಸರಾಸರಿ ಎತ್ತರದ ಕಡೆ ವಾಲುತ್ತದೆ. ಇದನ್ನು ಗಾಲ್ಟ್‌ರವರು ಆನುವಂಶಿಕ ವಿಲೋಮತೆ (Filial regression) ಎಂದು ಕರೆದರು. ಇದೇ ವಿಧವಾದ "ವಿಲೋಮತೆ" ಬುದ್ಧಿಶಕ್ತಿಯ ಬೆಳೆವಣಿಗೆಯಲ್ಲೂ ಕಂಡುಬರುತ್ತದೆ. ಉನ್ನತ ಉದ್ಯೋಗಗಳಲ್ಲಿರುವವರ ಸರಾಸರಿ ಬುದ್ಧಿಪ್ರಮಾಣ ಸುಮಾರು ೧೫೦ ಇದ್ದರೆ, ಅವರ ಮಕ್ಕಳ ಬುದ್ಧಿಪ್ರಮಾಣ ೧೨೦ ಕ್ಕಿಂತಲೂ ಸ್ವಲ್ಪ ಹೆಚ್ಚಾಗಿರುತ್ತದೆ. ಇನ್ನು ಸ್ವಲ್ಪ ಕೆಳದರ್ಜೆಯ ನೌಕರಿಗಳಲ್ಲಿರುವವರ ಸರಾಸರಿ ಬುದ್ಧಿಪ್ರಮಾಣ ಸುಮಾರು ೧೩೦ ಇದ್ದರೆ ಅವರ ಮಕ್ಕಳ ಬುದ್ಧಿಪ್ರಮಾಣ ಸರಾಸರಿ ೧೧೫ ಇರುತ್ತದೆ. ಹೆಚ್ಚುಕುಶಲ ಕೆಲಸಗಾರರ ಮತ್ತು ಗುಮಾಸ್ತರ ಬುದ್ಧಿಪ್ರಮಾಣ ಸರಾಸರಿ ೧೦೮ ಇದ್ದರೆ ಅವರ ಮಕ್ಕಳ ಬುದ್ಧಿಶಕ್ತಿ ೧೦೪ ಅಂದಾಜಿನಲ್ಲಿರುತ್ತದೆ. ಸರ್ಕಾರದವರು ನಡೆಯಿಸುವ ಮನೆಗಳಲ್ಲಿ ವಾಸಮಾಡುತ್ತಿರುವ ಮಂಕರ ಬುದ್ಧಿಪ್ರಮಾಣ ಸರಾಸರಿ ೫೫ ಇದ್ದರೆ ಅವರ ಮಕ್ಕಳ ಬುದ್ಧಿಪ್ರಮಾಣ ೭೦ ರ ವರೆಗೂ ಹೋಗಬಹುದು. ಹೀಗೆಯೇ ಮಕ್ಕಳ ಬುದ್ಧಿಶಕ್ತಿ ಜನಸಾಮಾನ್ಯರ ಬುದ್ಧಿಶಕ್ತಿಯ ಕಡೆ ವಾಲುತ್ತಾ ಹೋಗುತ್ತದೆ. ಹೀಗಾಗುವುದು ಆವರಣ ಪ್ರಭಾವದಿಂದಲ್ಲ. ಇದಕ್ಕೆ ವಿವರಣೆ ಆನುವಂಶಿಕ ದೃಷ್ಟಿಯಿಂದಲೇ ಕೊಡಬೇಕಾಗುತ್ತದೆ.

ಮೊದಲನೆಯ ಮಹಾಯುದ್ಧಕಾಲದಲ್ಲಿ ಆಲ್ಫಪರೀಕ್ಷೆಗಳನ್ನು ಸೈನಿಕರಿಗೆ ಕೊಟ್ಟಾಗ ಅನೇಕ ಜನಾಂಗಗಳವರ ಬುದ್ಧಿಶಕ್ತಿಯಲ್ಲಿ ಅಂತರ ಕಂಡುಬಂದಿತು. ೧೨,೪೯೨ ಬಿಳಿಯರ ಪರೀಕ್ಷಾಫಲಿತಾಂಶವನ್ನು ಬ್ರಿಗ್ ಹ್ಯಾಮ್‌ರವರು ಪಟ್ಟಿ ೮ ರಲ್ಲಿ

ತೋರಿಸಿದ್ದಾರೆ. ಈ ಗುಂಪಿನಲ್ಲಿ ಹಲವಾರು ಜನಾಂಗಕ್ಕೆ ಸೇರಿದ ಸೈನಿಕರಿದ್ದರು. ಅಮೆರಿಕಾದೇಶದ ಸಾಮಾನ್ಯ ಪ್ರಜೆಯ ಬುದ್ಧಿಶಕ್ತಿಯನ್ನು ಮೀರಿಸಿದ ಇತರ ಜನಾಂಗದ ಸೈನಿಕರು ಶೇಕಡಾ ಎಷ್ಟುಮಂದಿ ಇದ್ದರೆಂಬುದನ್ನು ಕ್ರಮವಾಗಿ ಪಟ್ಟಿಯಲ್ಲಿ ಸೂಚಿಸಿದ್ದಾರೆ.

ಪಟ್ಟಿ ೮. (೮–೭೨)

| | | | | | |
|---|---|---|---|---|---|
| ಇಂಗ್ಲೆಂಡ್ | ,, | ೬೭ | ಬೆಲ್ಜಿಯಂ | ,, | ೩೫ |
| ಸ್ಕಾಟ್ಲೆಂಡ್ | ,, | ೫೯ | ಆಸ್ಟ್ರಿಯ | ,, | ೨೮ |
| ಹಾಲೆಂಡ್ | ,, | ೫೮ | ಐರ್ಲ್ಯಾಂಡ್ | | ೨೬ |
| ಜರ್ಮನಿ | ,, | ೪೯ | ಟರ್ಕಿ | ,, | ೨೫ |
| ಡೆನ್ಮಾರ್ಕ್ | ,, | ೪೮ | ಗ್ರೀಸ್ | ,, | ೨೧ |
| ಕೆನಡ | ,, | ೪೭ | ರಷ್ಯಾ | ,, | ೧೯ |
| ಸ್ವೀಡನ್ | ,, | ೪೨ | ಇಟಲಿ | ,, | ೧೪ |
| ನಾರ್ವೆ | ,, | ೩೭ | ಪೋಲೆಂಡ್ | ,, | ೧೨ |

ಮೇಲಿನ ಪಟ್ಟಿಯ ಪ್ರಕಾರ ಇಂಗ್ಲೆಂಡ್, ಸ್ಕಾಟ್ಲೆಂಡ್, ಹಾಲೆಂಡ್, ಜರ್ಮನಿ, ಡೆನ್ಮಾರ್ಕ್, ಕೆನಡಾ, ಸ್ವೀಡನ್ ದೇಶದ ಜನರು ಇತರ ದೇಶದ ಜನರಿಗಿಂತ ಬುದ್ಧಿವಂತರೆಂದು ಗೊತ್ತಾಗುತ್ತದೆ. ಇಲ್ಲಿ ಸೂಚಿಸಿರುವ ಫಲಿತಾಂಶಗಳು ಕೆಲವು ಕಾರಣಗಳಿಂದ ಒಪ್ಪಲು ಸಾಧ್ಯವಿಲ್ಲವೆಂದು ಹಲವು ವೈಜ್ಞಾನಿಕರು ತಿಳಿಸುತ್ತಾರೆ. ಅದಕ್ಕೆ ಪ್ರಬಲವಾದ ಕಾರಣ ಪರೀಕ್ಷೆಗಳನ್ನು ರಚಿಸಿದ ಆಂಗ್ಲೇಯಭಾಷೆ ಎಲ್ಲಾ ಜನಾಂಗಗಳ ಮಾತೃಭಾಷೆಯಲ್ಲ. ಇಂಗ್ಲೆಂಡ್, ಕೆನಡ ಮತ್ತು ಸ್ಕಾಟ್ಲೆಂಡ್ ದೇಶದವರನ್ನು ಬಿಟ್ಟರೆ ಇತರರಿಗೆ ಆಂಗ್ಲೇಯ ಭಾಷೆಯಲ್ಲಿ

ಪರೀಕ್ಷೆಗಳನ್ನು ತೆಗೆದುಕೊಳ್ಳುವುದು ಕಷ್ಟವಾಗುತ್ತದೆ. ಆದ್ದರಿಂದ ಈ ಅಂಕಿ ಅಂಶಗಳು ಪ್ರಾಮಾಣಿಕತೆಯಿಂದ ಕೂಡಿರುವುದಿಲ್ಲವೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಹೀಗೆ ಕೆಲವರು ಅಭಿಪ್ರಾಯಪಟ್ಟರೂ ಬ್ರಿಗ್‌ಹ್ಯಾಮ್‌ರವರು ತಿಳಿಸುವಂತೆ ಮೇಲಿನ ಪಟ್ಟಿಯಲ್ಲಿ ಸೇರಿಸಿರುವ ಸೈನಿಕರಿಗೆಲ್ಲಾ ಆಂಗ್ಲೇಯ ಭಾಷೆ ಗೊತ್ತಿತ್ತು. ಒಂದುವೇಳೆ ಇಂಗ್ಲಿಷರನ್ನು ಸ್ಕಾಟ್ಲೆಂಡಿನವರನ್ನು ಮತ್ತು ಕೆನಡ ದೇಶದವರನ್ನು ಬಿಟ್ಟರೂ ಇಂಗ್ಲಿಷ್ ಮಾತೃಭಾಷೆಯಲ್ಲದ ಡಚ್ಚರು, ಜರ್ಮನರು, ನಾರ್ವೆ, ಸ್ವೀಡನ್‌ದೇಶದವರು ಉಳಿದ ಜನಾಂಗದವರಿಗಿಂತ ಹೆಚ್ಚು ಬುದ್ಧಿವಂತರಾಗಿರುವುದನ್ನು ಭಾಷಾ ದೃಷ್ಟಿಯಿಂದ ವಿವರಿಸುವುದು ಕಷ್ಟವಾಗುತ್ತದೆಂದು ತಿಳಿಸುತ್ತಾರೆ. ಬೆರ್ರಿ, ಟರ್ಮ್ಯ ಮೊದಲಾದವರ ಸಂಶೋಧನೆಗಳು ಕೂಡ ಪ್ರಪಂಚದ ಬುಡಕಟ್ಟುಗಳಲ್ಲಿ (Races) ಬುದ್ಧಿಶಕ್ತಿಯ ತಾರತಮ್ಯಗಳು ಇವೆ ಎಂಬುದನ್ನು ತೋರಿಸುತ್ತವೆ.

ಕೊನೆಯದಾಗಿ ಬುದ್ಧಿಪ್ರಮಾಣದ ಸ್ಥಿರತ್ವವನ್ನು (Constancy of Intelligence Quotient) ಆನುವಂಶಿಕವಾದದ ಪರವಾಗಿ ಸೂಚಿಸಬಹುದು. ಹಿಂದೆ ತಿಳಿಸಿದಂತೆ ಒಬ್ಬನ ದೈಹಿಕ ಮಾನಸಿಕ ವಯಸ್ಸು ಕ್ಲುಪ್ತವಾದ ಕಾಲದವರೆಗೆ ಹೆಚ್ಚುತ್ತಾ ಹೋಗುತ್ತದೆ. ಆದರೆ ಬುದ್ಧಿ ಪ್ರಮಾಣದಲ್ಲಿ ಹೆಚ್ಚು ಬದಲಾವಣೆಗಳು ಆಗುವುದಿಲ್ಲ. ೫ ನೆಯ ವಯಸ್ಸಿನಲ್ಲಿ ಒಬ್ಬನ ಬುದ್ಧಿಪ್ರಮಾಣ ೧೨೦ ಇದ್ದರೆ, ೮ ನೆಯ ವಯಸ್ಸಿನಲ್ಲೂ ಸುಮಾರು ಅಷ್ಟೇ ಇರುತ್ತದೆ. ೧೨ ನೆಯ ವಯಸ್ಸಿನಲ್ಲಿ ಪರೀಕ್ಷೆ ಮಾಡಿದರೆ ಆಗಲೂ ಅವನ ಬುದ್ಧಿಪ್ರಮಾಣ ಅಷ್ಟೇ ಇರುತ್ತದೆ. ವ್ಯತ್ಯಾಸ ಕಂಡುಬಂದಲ್ಲಿ ಅದು ೭–೮ ಪಾಯಿಂಟುಗಳ ಒಳಗೆ

ಇರುತ್ತದೆ. ಆದ್ದರಿಂದ ಬುದ್ಧಿಶಕ್ತಿಯ ಮೇಲೆ ಆವರಣದ ಪ್ರಭಾವ ಅತ್ಯಲ್ಪವೆಂದು ಬುದ್ಧಿ ಪ್ರಮಾಣದ ಸ್ಥಿರತ್ವ ತೋರಿಸಿ ಕೊಡುತ್ತದೆ. ಹೀಗೆ ಹಲವಾರು ದೃಷ್ಟಾಂತಗಳನ್ನು ಆನುವಂಶಿಕದ ಪರವಾಗಿ ಕೊಡಬಹುದು. ಎಂದಮೇಲೆ ಬುದ್ಧಿಶಕ್ತಿಯ ಬೆಳವಣಿಗೆಯ ಮೇಲೆ ಆವರಣ ಪ್ರಭಾವವಿಲ್ಲವೆ ಎಂಬ ಸಂದೇಹ ಸ್ವಾಭಾವಿಕವಾಗಿ ತಲೆದೋರಬಹುದು. ಈ ಸಂದರ್ಭದಲ್ಲಿ ಅವಳಿ ಮಕ್ಕಳ ಮೇಲೆ ನಡಸಿದ ಸಂಶೋಧನೆಗಳನ್ನು ಪರಿಶೀಲಿಸಬಹುದು. ಅನನ್ಯ ಅವಳಿಮಕ್ಕಳನ್ನು ಒಂದೇ ಆವರಣದಲ್ಲಿ ಬೆಳೆಯಿಸಿ ಅವರ ಬುದ್ಧಿಪ್ರಮಾಣವನ್ನು ನಿರ್ಧರಿಸಿದರೆ ಕಂಡುಬರುವ ವ್ಯತ್ಯಾಸವೆಷ್ಟು ಮತ್ತು ಅನನ್ಯ ಅವಳಿ ಮಕ್ಕಳನ್ನು ಬೇರ್ಪಡಿಸಿ ಬೇರೆ ಬೇರೆ ಆವರಣದಲ್ಲಿ ಬೆಳಸಿದರೆ ಆವರಣದ ಪ್ರಭಾವ ಬುದ್ಧಿಶಕ್ತಿಯ ಬೆಳವಣಿಗೆಯ ಮೇಲೆ ಕಂಡುಬರುತ್ತದೆಯೇ ಎಂಬುದನ್ನು ನ್ಯೂಮನ್, ಫ್ರೀಮನ್ ಮತ್ತು ಹೊಲ್ಜಿಂಗರ್ ಆವರು ಪರಿಶೋಧನೆಗಳ ಮೂಲಕ ಪರಿಶೀಲಿಸಿದ್ದಾರೆ. ಅವರು ಕಂಡುಹಿಡಿದಿರುವ ಮುಖ್ಯಾಂಶಗಳನ್ನು ಪಟ್ಟಿ ೯ ರಲ್ಲಿ ಕೊಡಲಾಗಿದೆ.

ಪಟ್ಟಿ ೯

**ಅವಳಿ ಮಕ್ಕಳ ತಾರತಮ್ಯದ ಸರಾಸರಿ** (೧೧–೫೨)

| ಗುಣ | ಅನನ್ಯ ಅವಳಿ ಒಟ್ಟಿಗೆ ಬೆಳೆದದ್ದು | ಅನನ್ಯ ಅವಳಿ ಬೇರೆಬೇರೆ ಬೆಳೆದದ್ದು | ಸಾಧಾರಣ ಅವಳಿ ಒಟ್ಟಿಗೆ ಬೆಳೆದದ್ದು |
|---|---|---|---|
| ಎತ್ತರ .. | ೦.೬೫" | ೦.೭" | ೧.೭" |
| ತೂಕ .. | ೪.೧ ಪೌಂಡ್ | ೮.೨ ಪೌಂಡ್ | ೧೦.೦ ಪೌಂಡ್ |
| ಬಿ. ಕ್ಯು .. | ೫.೯ | ೮.೨ | ೯.೯ |
| ವಿದ್ಯಾಯು .. | ೬.೪ ತಿಂಗಳು | ೧೬.೩ ತಿಂಗಳು | ೧೧.೬ ತಿಂಗಳು. |

ಮೇಲಿನ ಪಟ್ಟಿಯಲ್ಲಿ ತೋರಿಸಿರುವಂತೆ ಅನನ್ಯ ಅವಳಿ ಮಕ್ಕಳು ಒಟ್ಟಿಗೆ ಬೆಳೆದರೂ, ಬೇರೆ ಬೇರೆ ಮನೆಗಳಲ್ಲಿ ಬೆಳೆದರೂ ಎತ್ತರ ದಲ್ಲಿ ವ್ಯತ್ಯಾಸವೇನೂ ಇಲ್ಲ. ಎತ್ತರ ಆನುವಂಶಿಕ ಗುಣ– ಸಾಧಾರಣ ಅವಳಿಗಳು ಒಟ್ಟಿಗೆ ಬೆಳೆದರೂ ಅವರ ಎತ್ತರದಲ್ಲಿ ೧.೭" ವ್ಯತ್ಯಾಸವಿರುತ್ತದೆ. ಇದಕ್ಕೆ ಕಾರಣ ಅವರ ಆನು ವಂಶಿಕದಲ್ಲಿರುವ ವ್ಯತ್ಯಾಸ. ತೂಕ ಆವರಣದ ವ್ಯತ್ಯಾಸಕ್ಕೆ ಒಳಪಟ್ಟಿದೆ. ಅನನ್ಯ ಮಕ್ಕಳು ಒಂದೇ ಮನೆಯಲ್ಲಿ ಬೆಳೆದಾಗ ತೂಕದಲ್ಲಿ ವ್ಯತ್ಯಾಸ ೪.೧ ಪೌಂಡ್‌ಗಳಷ್ಟಿರುತ್ತದೆ. ಅವರು ಬೇರೆ ಬೇರೆ ಮನೆಗಳಲ್ಲಿ ಬೆಳೆದಾಗ ಇದಕ್ಕೆ ಎರಡರಷ್ಟಕ್ಕಿಂತಲೂ ಹೆಚ್ಚಾಗಿ ವ್ಯತ್ಯಾಸ ಕಂಡುಬಂದಿತು. ಬುದ್ಧಿ ಪ್ರಮಾಣದಲ್ಲಿ (I. Q) ಒಟ್ಟಿಗೆ ಬೆಳೆದ ಅನನ್ಯ ಮಕ್ಕಳಲ್ಲಿ ೫.೯ ಪಾಯಿಂಟು ಗಳಷ್ಟು ಅಂತರ ಕಂಡುಬಂದಿತು. ಬೇರೆ ಬೇರೆ ಆವರಣದಲ್ಲಿ ಬೆಳೆದಾಗ ಈ ಅಂತರ ೮.೨ ಪಾಯಿಂಟುಗಳಷ್ಟು ಇದ್ದಿತು. ಈ ಅಂತರ ಸುಮಾರು ಒಂದೂವರೆಯಷ್ಟಿದೆ. ಇದು ಆವರಣದ ಪ್ರಭಾವವೆಂದು ಹೇಳಲಾಗಿದೆ.

ನ್ಯೂಮನ್ ಮೊದಲಾದವರು ಆವರಣವನ್ನೂ ಮೂರು ಭಾಗಗಳಾಗಿ ವಿಂಗಡಿಸಿದ್ದಾರೆ. ಭೌತಿಕ ವಾತಾವರಣ; ಇದು ಒಂದು ಪ್ರದೇಶದ ಎತ್ತರ, ಶೀತೋಷ್ಣಗಳಿಗೆ ಸಂಬಂಧಿಸಿರುತ್ತದೆ. ಸಾಮಾಜಿಕ ವಾತಾವರಣ ಒಂದು ಮನೆತನದ ನಡೆ ನುಡಿ, ಆರ್ಥಿಕ ಮಟ್ಟ ಮೊದಲಾದುವುಗಳನ್ನು ಕೂಡಿರುತ್ತದೆ. ವಿದ್ಯೆಯ ಆವರಣ ಮೂರನೆಯದಾಗಿರುತ್ತದೆ. ಇದು ಒಂದು ಮನೆತನದಲ್ಲಿ ಕಂಡುಬರುವ ಓದುಬರಹದ ಮಟ್ಟ, ಪುಸ್ತಕಭಂಡಾರ, ವರ್ತಮಾನಪತ್ರಿಕೆಗಳು ಮತ್ತು ಇತರ ವಾರದ ಅಥವಾ ತಿಂಗಳ ಸಂಚಿಕೆಗಳು, ಶಾಲೆಯ ಆವರಣ ಮೊದಲಾದುವುಗಳಿಗೆ

ಸಂಬಂಧಪಟ್ಟಿರುತ್ತದೆ. ಪರಿಶೋಧನೆಗಳ ಪ್ರಕಾರ ಸಾಮಾಜಿಕ ಆವರಣಕ್ಕೂ ಬುದ್ಧಿಪ್ರಮಾಣಕ್ಕೂ ಪರಸ್ಪರ ಸಂಬಂಧ ೦.೫೦೭ ಇದೆ ಎಂದು ಗೊತ್ತಾಗಿದೆ. ವಿದ್ಯೆಯ ಆವರಣಕ್ಕೂ ಮಗುವಿನ ವಿದ್ಯಾಪ್ರಗತಿಗೂ ೦.೭೯೧ ಸಂಬಂಧವಿದೆ ಎಂದು ತಿಳಿಯಲಾಗಿದೆ. ಮಕ್ಕಳ ಬುದ್ಧಿಶಕ್ತಿಯ ಬೆಳವಣಿಗೆಯ ಮೇಲೆ ಆವರಣದ ಪ್ರಭಾವವೆಷ್ಟಿದೆ ಎಂಬುದು ಇದರಿಂದ ತಿಳಿಯುತ್ತದೆ.

ಕೆಲವು ವರ್ಷಗಳ ಹಿಂದೆ ಮಿಡ್ನಾಪುರ ಜಿಲ್ಲೆಯಲ್ಲಿ ಕ್ರೈಸ್ತ ಪಾದ್ರಿಯೊಬ್ಬರು ಎರಡು ವಿಚಿತ್ರ ಪ್ರಾಣಿಗಳು ಓಡಿಹೋಗುತ್ತಿರುವುದನ್ನು ಒಂದು ಕಾಡಿನಲ್ಲಿ ಕಂಡರು. ಅವರ ಕುತೂಹಲ ಕೆರಳಿ ಆ ಪ್ರಾಣಿಗಳನ್ನು ಪತ್ತೆಹಚ್ಚಿದರು. ಅವೆರಡು ಹೆಣ್ಣು ಮಕ್ಕಳಾಗಿದ್ದವು. ನಡಗೆ, ಕೂಗು, ಊಟಮಾಡುವ ವಿಧಾನ, ಹೆದರಿಕೆ ಇವುಗಳೆಲ್ಲದರಲ್ಲಿಯೂ ತೋಳದ ಮರಿಗಳಂತೆ ವರ್ತಿಸುತ್ತಿದ್ದವು. ಒಂದು ತೋಳವು ತಾಯಿ ಮನೆಯಲ್ಲಿಲ್ಲದಾಗ ಈ ಎರಡು ಶಿಶುಗಳನ್ನು ತನ್ನಗೂಡಿಗೆ ತೆಗೆದುಕೊಂಡು ಹೋಗಿ ಸಲಹುತ್ತಿತ್ತು. ಅಕಸ್ಮಾತ್ತಾಗಿ ಕ್ರೈಸ್ತ ಪಾದ್ರಿಯು ಈ ಎರಡು ಶಿಶುಗಳನ್ನು ಕಂಡನು. ಅನಂತರ ಮಕ್ಕಳನ್ನು ತನ್ನ ನಿವಾಸಕ್ಕೆ ಕರೆದುಕೊಂಡುಹೋಗಿ ಬೆಳಸಲು ಪ್ರಯತ್ನಪಟ್ಟನು. ಒಂದು ಮಗುವು ಸ್ವಲ್ಪಕಾಲದಲ್ಲಿಯೇ ಸತ್ತುಹೋಯಿತು. ಮತ್ತೊಂದು ಕೆಲವು ವರ್ಷಗಳಕಾಲ ಬದುಕಿದ್ದಿತು. ಆವರಣದ ಪ್ರಭಾವ ಈ "ತೋಳ ಮಕ್ಕಳ" ಮೇಲೆ ಕಾಣಬಹುದು. ಬುದ್ಧಿಶಕ್ತಿಯ ಬೆಳವಣಿಗೆ ಸಂಪೂರ್ಣವಾಗಿ ಆನುವಂಶಿಕವಾಗಿದ್ದಲ್ಲಿ "ತೋಳ ಮಕ್ಕಳು" ಸಾಮಾನ್ಯ ಮಾನವ ಮಕ್ಕಳಂತೆ ಬುದ್ಧಿಶಕ್ತಿಯನ್ನು ಪ್ರದರ್ಶಿಸುತ್ತಿದ್ದರು. ಆದರೆ ಈ ಮಕ್ಕಳು ಬುದ್ಧಿ

ಹೀನರಾಗಿ ಕಾಡುಪ್ರಾಣಿಗಳಂತೆ ವರ್ತಿಸುತ್ತಿದ್ದರು. ವ್ಯಕ್ತಿಯ ಬೆಳವಣಿಗೆಯಲ್ಲಿ ಆವರಣದ ಪ್ರಭಾವವನ್ನು ನಿಕೃಷ್ಟವಾಗಿ ಭಾವಿಸುವಂತಿಲ್ಲ.

ನೆಟ್ಟಬೀಜ ಚೆನ್ನಾಗಿ ಫಲಿಸಬೇಕಾದರೆ ಅದಕ್ಕೆ ಫಲವತ್ತಾದ ಭೂಮಿ, ಗೊಬ್ಬರ, ನೀರು, ಸೂರ್ಯರಶ್ಮಿ ಆವರಣದ ರೂಪದಲ್ಲಿ ಚೆನ್ನಾಗಿ ಬೀಳಬೇಕು. ಬಂಜರು ಭೂಮಿಯಲ್ಲಿ ಬೆಳೆ ಚೆನ್ನಾಗಿ ಬೆಳೆಯುವುದಿಲ್ಲ. ಅಂತೆಯೇ ಫಲವತ್ತಾದ ಭೂಮಿಯಲ್ಲಿ ಜಳ್ಳಾದ ಕಾಳನ್ನು ಬಿತ್ತಿ, ಅದಕ್ಕೆ ನೀರು, ಗೊಬ್ಬರ ಕೊಟ್ಟರೂ ಅದು ಫಲಿಸುವುದಿಲ್ಲ. ಅದೇ ರೀತಿ, 'ಆನುವಂಶೀಯತೆ' ಮತ್ತು 'ಆವರಣ' ಬುದ್ಧಿಶಕ್ತಿಯ ಬೆಳವಣಿಗೆಗೆ ಅತ್ಯಗತ್ಯವಾಗಿರುತ್ತದೆ.

ಆನುವಂಶೀಯತೆಗೆ ಸಂಬಂಧಪಟ್ಟ ಮತ್ತೊಂದು ಅಂಶವನ್ನು ಇಲ್ಲಿ ಸೂಚಿಸಿದರೆ ತಪ್ಪಾಗಲಾರದು. ಮೇಧಾವಿಗಳಲ್ಲಿ ಮತ್ತು ಮಂದಬುದ್ಧಿಯುಳ್ಳವರಲ್ಲಿ ಯಾರಿಗೆ ಸಂತಾನ ಜಾಸ್ತಿಯಾಗಿರುತ್ತದೆಂಬ ಅಂಶವನ್ನು ರೇಮಂಡ್ ಬಿ. ಕ್ಯಟೇಲ್‌ರವರು ಪರಿಶೋಧಿಸಿದ್ದಾರೆ. ಹತ್ತು ವರ್ಷದ ೩,೭೩೪ ಮಕ್ಕಳಿಗೆ ಬುದ್ಧಿಶಕ್ತಿ ಪರೀಕ್ಷೆಗಳನ್ನು ಕೊಟ್ಟರು. ಪ್ರತಿಯೊಬ್ಬ ಹುಡುಗನ ಮನೆಯಲ್ಲೂ ಎಷ್ಟು ಮಕ್ಕಳಿದ್ದಾರೆ ಎಂಬ ವಿಷಯವನ್ನು ಸಂಗ್ರಹಿಸಿದರು. ಆ ಅಂಕಿಗಳು ಕೆಳಗೆ ಸೂಚಿಸಿದಂತೆ ಇದ್ದವು :—

ಪಟ್ಟಿ ೧೦. (೫–೯೫)

| ಮಕ್ಕಳ ಬುದ್ಧಿ ಪ್ರಮಾಣ. | ಮನೆಯಲ್ಲಿದ್ದ ಮಕ್ಕಳ ಸರಾಸರಿ ಸಂಖ್ಯೆ. ಪಟ್ಟಣದಲ್ಲಿ. | ಹಳ್ಳಿಗಳಲ್ಲಿ. |
|---|---|---|
| ಐ.ಕ್ಯು ೧೩೦ ಮತ್ತು ಅದಕ್ಕಿಂತ ಹೆಚ್ಚು. | ೨.೩೫ | ೧.೮೦ |

| | | |
|---|---|---|
| ೧೨೦—೧೩೦ | ೨.೯೨ | ೨.೩೧ |
| ೧೧೦—೧೨೦ | ೨.೭೬ | ೨.೬೨ |
| ೧೦೦—೧೧೦ | ೩.೦೦ | ೩.೨೭ |
| ೯೦—೧೦೦ | ೩.೬೦ | ೩.೭೨ |
| ೮೦— ೯೦ | ೪.೧೩ | ೪.೨೧ |

ಮೇಲಿನ ಸಂಖ್ಯೆಗಳು ಸೂಚಿಸುವ ಮುಖ್ಯಾಂಶವೇನೆಂದರೆ ಹೆಚ್ಚು ಬುದ್ಧಿಶಕ್ತಿಯುಳ್ಳವರಿಗಿಂತ ಕಡಮೆ ಬುದ್ಧಿಶಕ್ತಿಯುಳ್ಳವರು ಒಂದಕ್ಕೆ ಎರಡರಷ್ಟು ಹೆಚ್ಚು ಸಂತಾನವನ್ನು ಪಡೆಯುತ್ತಾರೆ. ಒಂದುವೇಳೆ ಆರ್ಥಿಕ ದುಃಸ್ಥಿತಿ ಹೆಚ್ಚು ಮಕ್ಕಳಿಗೆ ಕಾರಣವೆಂದು ಕೆಲವರು ಅಭಿಪ್ರಾಯಪಟ್ಟರೂ ಕೂಲಿ ಕೆಲಸ ಮಾಡುವವರಲ್ಲಿ ಹೆಚ್ಚು ಬುದ್ಧಿವಂತರು ಕಡಮೆ ಬುದ್ಧಿವಂತರಿಗಿಂತ ಕಡಮೆ ಸಂಖ್ಯೆಯ ಮಕ್ಕಳನ್ನು ಪಡೆದಿರುತ್ತಾರೆಂದು ಐಸೆಂಕ್‌ರವರು ತಿಳಿಸುತ್ತಾರೆ.

ಥಾಂಪ್ಸನ್‌ರವರು ವೈಟ್‌ದ್ವೀಪದಲ್ಲಿ ಒಂದು ಪ್ರಯೋಗವನ್ನು ಮಾಡಿದರು. ಆ ದ್ವೀಪದಲ್ಲಿದ್ದ ಹತ್ತುವರ್ಷದ ಎಲ್ಲಾ ಮಕ್ಕಳಿಗೂ ಬುದ್ಧಿಶಕ್ತಿ ಪರೀಕ್ಷೆಗಳನ್ನು ಕೊಟ್ಟರು. ಒಟ್ಟು ೧,೦೮೪ ಮಕ್ಕಳು ಪರೀಕ್ಷಣಗಳನ್ನು ತೆಗೆದುಕೊಂಡರು. ಪರೀಕ್ಷಣಗಳನ್ನು ತೆಗೆದುಕೊಂಡ ಪ್ರತಿಯೊಬ್ಬ ಹುಡುಗ ಹುಡುಗಿಯರ ಮನೆಯಲ್ಲಿ ಎಷ್ಟು ಜನ ಮಕ್ಕಳಿರುವರೆಂದು ತಿಳಿದು ಅವರ ಅಂಕಿ ಅಂಶಗಳನ್ನು ಪಟ್ಟಿ ೧೧ ರಲ್ಲಿ ಕೊಟ್ಟಿದ್ದಾರೆ.

ಪಟ್ಟಿ ೧೧. (೫–೯೬)

| ಕುಟುಂಬಗಳು. | | ಕುಟುಂಬಗಳಲ್ಲಿನ ಮಕ್ಕಳಸಂಖ್ಯೆ. | | ಐ.ಕ್ಯು. |
|---|---|---|---|---|
| ೧೧೫ .... | .... | ೧ | .... | ೧೦೬.೨ |
| ೨೧೨ .... | .... | ೨ | .... | ೧೦೫.೪ |

| | | | | | |
|---|---|---|---|---|---|
| ೧೮೫ | .... | .... | ೩ | .... | ೧೦೨.೩ |
| ೧೫೨ | .... | .... | ೪ | .... | ೧೦೧.೫ |
| ೧೨೭ | .... | .... | ೫ | .... | ೯೯.೬ |
| ೧೦೩ | .... | .... | ೬ | .... | ೯೬.೫ |
| ೮೮ | .... | .... | ೭ | .... | ೯೩.೮ |
| ೧೦೨ | .... | .... | ೮+ | .... | ೯೫.೮ |



ಮೇಲಿನ ಪಟ್ಟಿಯಲ್ಲಿ ಕೂಡ ಬುದ್ಧಿಶಕ್ತಿ ಕಡಮೆಯಾದಂತೆಲ್ಲ ಮಕ್ಕಳ ಸಂಖ್ಯೆ ಜಾಸ್ತಿಯಾಗುತ್ತದೆ. ಹುಟ್ಟುವ ಸಂಖ್ಯೆಗೂ ಬುದ್ಧಿಶಕ್ತಿಯ ಮಟ್ಟಕ್ಕೂ ಒಂದು ವಿಧವಾದ ಸಂಬಂಧ ವಿರುವಂತೆ ಕಾಣುತ್ತದೆ. ಕೆಲವರು ವೈಜ್ಞಾನಿಕರು ಇದೇ ರೀತಿಯಲ್ಲಿ ಸಂತಾನಗಳು ಹೆಚ್ಚುತ್ತಿದ್ದರೆ, ಕೆಲವು ವರ್ಷಗಳಾದ ಮೇಲೆ ದೇಶದಲ್ಲಿ ಮಂದಬುದ್ಧಿಯುವರು ಹೆಚ್ಚಾಗಿ, ಬುದ್ಧಿವಂತರ ಸಂಖ್ಯೆ ತೀರ ಕಡಮೆಯಾಗಬಹುದೆಂಬ ಶಂಕೆಯಿಂದ ಕೂಡಿದ್ದಾರೆ. ದೇಶದಲ್ಲಿ ಬುದ್ಧಿಶಕ್ತಿಯ ಮಟ್ಟ ಕ್ಷೀಣವಾಗಬಹುದೆಂದು ಭಯಪಡುತ್ತಾರೆ. ಆದರೆ ಇದೇ ಕ್ಯಾಟೇಲ್ ಮತ್ತು ಥಾಂಪ್ಸನ್‌ರವರು ಕೆಲವು ವರ್ಷಗಳಾದ ಮೇಲೆ ಮೊದಲು ಕೊಟ್ಟ ಪರೀಕ್ಷೆಗಳನ್ನು ಅಥವಾ ಅದೇ ತರಹ ಪರೀಕ್ಷೆಗಳನ್ನು ಆಯಾ ಭಾಗದ ಮಕ್ಕಳಿಗೆ ಮತ್ತೆ ಮತ್ತೆ ಕೊಟ್ಟು ತಮ್ಮ ಪರಿಶೋಧನೆಗಳನ್ನು ಪ್ರಚುರಪಡಿಸಿದ್ದಾರೆ. ಆ ಪರಿಶೋಧನೆಗಳ ಪ್ರಕಾರ ಕೆಲವರು ಭಯಪಟ್ಟಂತೆ ಬುದ್ಧಿಶಕ್ತಿಯ ಮಟ್ಟದಲ್ಲಿ ಕೀಳ್ಮುಖತೆ ಏನೂ ಕಾಣಲಿಲ್ಲ. ಮಂದಬುದ್ಧಿಯುವರು ಹೆಚ್ಚು ಸಂತಾನ ಪಡೆಯುತ್ತಾರೆಂಬುದು ನಿಜವಾದರೂ, ವರ್ಷಗಳ ನಂತರ ದೇಶದಲ್ಲಿ ಬುದ್ಧಿಶಕ್ತಿ ಮಟ್ಟ ಕುಗ್ಗುತ್ತದೆಂಬ ಭಯಕ್ಕೆ ಸರಿಯಾದ ಕಾರಣಗಳು ಸಿಕ್ಕಿಲ್ಲ. ಬುದ್ಧಿಶಕ್ತಿಯ ಪ್ರಸರಣದಲ್ಲಿ

ಪರಿಳಿತ ಕಂಡುಬಂದರೂ, ಬುದ್ಧಿಶಕ್ತಿಯ ನಾಶಕ್ಕೆ ಯಾವ ಆಧಾರಗಳೂ ಸಿಕ್ಕಿಲ್ಲ. ಆನುವಂಶಿಕತೆಯು ಬುದ್ಧಿಶಕ್ತಿಯನ್ನು ಹೇಗೆ ನಿರ್ಧರಿಸುತ್ತದೆಂಬುದು ಒಂದು ತೊಡಕಾದ ಸಮಸ್ಯೆಯಾಗಿದೆ. ಇದನ್ನು ಬಿಡಿಸಬೇಕಾದರೆ ಹಲವಾರು ವರ್ಷಗಳ ಸತತ ಮಾನವ ಪ್ರಯತ್ನ ಪರಿಶೋಧನೆಗಳ ಮೂಲಕ ನಡೆಯಬೇಕಾಗಿದೆ.

## ಬುದ್ಧಿಶಕ್ತಿ ಪರೀಕ್ಷೆಗಳ ಕೆಲವು ಉಪಯೋಗಗಳು

ದೈನಂದಿನ ಜೀವನದಲ್ಲಿ ಹಲವಾರು ಬಗೆಯಲ್ಲಿ ಬುದ್ಧಿಶಕ್ತಿಯ ಪರೀಕ್ಷೆಗಳನ್ನು ಉಪಯೋಗಿಸಬಹುದು. ಶಾಲೆಗಳಲ್ಲಿ ಈ ಪರೀಕ್ಷಣಗಳ ಪ್ರಯೋಜನವನ್ನು ಗಮನಿಸೋಣ. ಮಕ್ಕಳು ವಿದ್ಯಾಭ್ಯಾಸಕ್ಕೆ ಶಾಲೆಗಳನ್ನು ಸೇರಿದಾಗ, ಅವರ ಬುದ್ಧಿಶಕ್ತಿಯ ಅಂತರವನ್ನು ಗಮನಿಸದೆ ಎಲ್ಲರನ್ನೂ ಒಟ್ಟಿಗೆ ಒಂದೇ ತರಗತಿಗೆ ಸೇರಿಸುವುದು ಅಷ್ಟು ಒಳ್ಳೆಯದಲ್ಲ. ಅದಕ್ಕೆ ಬದಲಾಗಿ ಮಕ್ಕಳನ್ನು ಬುದ್ಧಿಶಕ್ತಿಯ ಆಧಾರದ ಮೇಲೆ ವಿಂಗಡಿಸಿ, ಬೇರೆ ಬೇರೆ ಗುಂಪುಗಳನ್ನಾಗಿ ಮಾಡಿ ವಿದ್ಯಾಭ್ಯಾಸ ಮಾಡಿಸಿದರೆ ಎಲ್ಲಾ ದೃಷ್ಟಿಯಿಂದಲೂ ಉತ್ತಮವಾಗಿರುತ್ತದೆ. ಇಂಗ್ಲೆಂಡಿನಲ್ಲಿ ಈ ಪದ್ಧತಿಯನ್ನು ಅನುಸರಿಸುತ್ತಿದ್ದಾರೆಂದು ಗೊತ್ತಾಗಿದೆ. ಉತ್ತಮ ಬುದ್ಧಿಶಕ್ತಿಯ ಹುಡುಗರನ್ನು ಒಂದು ಗುಂಪನ್ನಾಗಿ ಮಾಡಿ ಅವರನ್ನು 'ಎ' ಪಂಗಡವೆಂದು ಕರೆಯುತ್ತಾರೆ. ಸಾಮಾನ್ಯ ಬುದ್ಧಿಶಕ್ತಿಯುಳ್ಳವರನ್ನು ಪ್ರತ್ಯೇಕಿಸಿ ಅವರನ್ನು 'ಬಿ' ಪಂಗಡಕ್ಕೆ ಸೇರಿಸುತ್ತಾರೆ. ಕಡಮೆ ಬುದ್ಧಿಶಕ್ತಿಯುಳ್ಳವರನ್ನು ಮೂರನೆಯ ಗುಂಪನ್ನಾಗಿ ಮಾಡಿ 'ಸಿ' ಪಂಗಡವೆಂದು ಕರೆಯುತ್ತಾರೆ. ಈ ವಿಧವಾಗಿ ಮೂರು ಪಂಗಡಗಳನ್ನಾಗಿ

ಮಾಡುವುದು ಮಕ್ಕಳನ್ನು ಬುದ್ಧಿವಂತರು, ಸಾಮಾನ್ಯ ಬುದ್ಧಿವಂತರು, ಮಂದಬುದ್ಧಿಯುಳ್ಳವರು ಎಂದು ಕರೆಯುವುದಕ್ಕಲ್ಲ. ಯಾವ ಗುಂಪಿನವರಿಗೆ ಎಷ್ಟು ಬೋಧಿಸಬೇಕು, ಬೋಧಿಸುವ ವಿಧಾನ ಹೇಗಿರಬೇಕು-ಎಂಬುದನ್ನು ತಿಳಿದು ಆ ರೀತಿ ನಡೆಯುವುದಕ್ಕೋಸ್ಕರವಾಗಿದೆ. 'ಎ' ಪಂಗಡದವರು ಶೀಘ್ರವಾಗಿ ಹೇಳಿದ್ದನ್ನು ಗ್ರಹಿಸಿಕೊಂಡು 'ಬಿ' ಮತ್ತು 'ಸಿ' ಪಂಗಡದವರು ಕಲಿಯುವುದಕ್ಕಿಂತಲೂ ಹೆಚ್ಚಾಗಿ ಗೊತ್ತಾದ ಕಾಲದಲ್ಲಿ ಕಲಿಯುತ್ತಾರೆ. 'ಸಿ' ಪಂಗಡದವರಿಗೆ ಬೋಧಿಸುವಾಗ ವಿಶೇಷ ರೀತಿಯ ವಿಧಾನಗಳನ್ನು ಅನುಸರಿಸಿ ಅವರ ಮನಸ್ಸಿಗೆ ಹಿಡಿಯುವಂತೆ ಪಾಠ ಮಾಡಬೇಕು. ಒಂದು ಪಂಗಡಕ್ಕೆ ದಾಖಲೆ ಮಾಡಲ್ಪಟ್ಟವರು ಅದೇ ಪಂಗಡದಲ್ಲಿದ್ದುಕೊಂಡು ವಿದ್ಯಾಭ್ಯಾಸ ಮುಂದುವರಿಸಬೇಕೆಂದಲ್ಲ. ಪ್ರಗತಿಯ ಆಧಾರದ ಮೇಲೆ ಒಬ್ಬನನ್ನು ಒಂದು ಪಂಗಡದಿಂದ ಮತ್ತೊಂದು ಪಂಗಡಕ್ಕೆ ವರ್ಗಾಯಿಸಬಹುದು. ಹೀಗೆ ಮಾಡುವುದರಿಂದ ಬುದ್ಧಿವಂತನಾದ ಹುಡುಗನಕಾಲ ಶಾಲೆಯಲ್ಲಿ ನಷ್ಟವಾಗುವುದಿಲ್ಲ. ದಡ್ಡ ಹುಡುಗರಿಗೂ ಇದರಿಂದ ಪ್ರಯೋಜನವಾಗುತ್ತದೆ.

ಅಮೆರಿಕಾ ದೇಶದಲ್ಲಿ ಪ್ರತ್ಯೇಕ ಶಾಲೆಗಳನ್ನೇ ಬುದ್ಧಿವಂತ ಹುಡುಗರಿಗಾಗಿ ತೆರೆದಿದ್ದಾರೆ. ಇವಕ್ಕೆ Schools for Exceptional Children ಎಂದು ಹೆಸರು. ಬುದ್ಧಿಶಕ್ತಿಯ ಪರೀಕ್ಷೆಗಳ ಉಪಯೋಗದಿಂದ ಮೇಧಾವಿಗಳಾದ ಹುಡುಗರು ಕಂಡುಬಂದರೆ ಆ ಹುಡುಗರನ್ನು ಇಂತಹ ಪ್ರತ್ಯೇಕ ಪಾಠ ಶಾಲೆಗಳಿಗೆ ಓದಲು ಕಳುಹಿಸುತ್ತಾರೆ. ಅವರ ಶಕ್ತಿಗೆ ಸರಿ ಹೋಗುವ ವಿಷಯಗಳನ್ನು ಅಲ್ಲಿ ಕಲಿಸಲಾಗುತ್ತದೆ. ಮಂದ ಬುದ್ಧಿಯ ಮತ್ತು ದಡ್ಡಹುಡುಗರಿಗೂ ಕೂಡ ಪ್ರತ್ಯೇಕ ಶಾಲೆಗಳಿವೆ.

ಹೈಸ್ಕೂಲಿನಲ್ಲಿ ತೇರ್ಗಡೆಯಾಗಿ ವಿಶ್ವವಿದ್ಯಾನಿಲಯಗಳಿಗೆ ಸೇರುವಾಗಲೂ ಅನೇಕ ವಿಶ್ವವಿದ್ಯಾನಿಲಯಗಳಲ್ಲಿ ಬುದ್ಧಿಶಕ್ತಿ ಪರೀಕ್ಷೆಗಳನ್ನು ಉಪಯೋಗಿಸಲಾಗುತ್ತಿದೆ. ಒಬ್ಬನು ಹೈಸ್ಕೂಲಿನಲ್ಲಿ ತೇರ್ಗಡೆಯಾದ ಮಾತ್ರಕ್ಕೇ ಅವನು ವಿಶ್ವವಿದ್ಯಾನಿಲಯಕ್ಕೆ ಸೇರಲು ಅರ್ಹನೆಂದು ಭಾವಿಸುವುದಿಲ್ಲ. ವಿಶ್ವವಿದ್ಯಾನಿಲಯದಲ್ಲಿ ಬೋಧಿಸುವ ಪಾಠಗಳನ್ನು ಕಲಿತು, ಅವರು ಒದಗಿಸುವ ವಿದ್ಯಾರ್ಜನೆಯ ಸನ್ನಿವೇಶಗಳಿಂದ ಲಾಭ ಪಡೆಯುವಷ್ಟು ಬುದ್ಧಿಶಕ್ತಿ ಒಬ್ಬನಲ್ಲಿದೆಯೇ ಎಂಬುದನ್ನು ತಿಳಿಯಲು ಯತ್ನಿಸುತ್ತಾರೆ. ಎಷ್ಟೋ ಜನ ಹುಡುಗರು ನಮ್ಮ ದೇಶದಲ್ಲಿ ಎರಡು ಮೂರು "ದಂಡಯಾತ್ರೆ"ಗಳನ್ನು ಮಾಡಿ ಹೈಸ್ಕೂಲು ವಿದ್ಯಾಭ್ಯಾಸ ಮುಗಿಸಿ ಕಾಲೇಜುಗಳನ್ನು ಸೇರುತ್ತಾರೆ. ಕಾಲೇಜುಗಳಲ್ಲಿಯೂ ಅವರ ಪ್ರಗತಿ ಆಶಾದಾಯಕವಾಗಿರುವುದಿಲ್ಲ. ಒಂದುವೇಳೆ ಹೈಸ್ಕೂಲು ಪರೀಕ್ಷೆಯಲ್ಲಿ ಮೊದಲನೆಯ ವರ್ಷವೇ ಉತ್ತೀರ್ಣನಾಗಿದ್ದರೂ ಸಾಕಾದಷ್ಟು ಬುದ್ಧಿಶಕ್ತಿಯಿಲ್ಲದೆ, ಕಾಲೇಜು ಪರೀಕ್ಷೆಗಳಲ್ಲಿ ಉತ್ತೀರ್ಣರಾಗದಿರುವವರು ಎಷ್ಟೋಮಂದಿ ಇದ್ದಾರೆ. ಹುಡುಗರು ಪರೀಕ್ಷೆಗಳಲ್ಲಿ ಉತ್ತೀರ್ಣರಾಗದಿರಲು ಹಲವಾರು ಕಾರಣಗಳಿರಬಹುದು. ಅವುಗಳಲ್ಲಿ ಬುದ್ಧಿಶಕ್ತಿ ಪ್ರಬಲವಾದ ಕಾರಣವಾಗಿದೆ. ಕ್ಯಟೇಲ್‌ರವರು ತಿಳಿಸುವಂತೆ ಪ್ರೌಢಶಾಲೆಯ ವಿದ್ಯಾಭ್ಯಾಸದ ಲಾಭವನ್ನು ಸರಿಯಾಗಿ ಪಡೆಯಬೇಕಾದರೆ ಬುದ್ಧಿಪ್ರಮಾಣ ಸುಮಾರು ೧೨೪ ರಷ್ಟು ಇರಬೇಕು. ವಿಶ್ವವಿದ್ಯಾನಿಲಯಗಳಿಗೆ ಸೇರುವವರು ಅವುಗಳಿಂದ ಸರಿಯಾದ ಪ್ರಯೋಜನ ಪಡೆಯಬೇಕಾದರೆ ಬುದ್ಧಿ ಪ್ರಮಾಣ ೧೩೪ ರಷ್ಟಾದರೂ ಇರಬೇಕಾಗುತ್ತದೆ. ಇದಕ್ಕಿಂತಲೂ ಕಡಮೆ ಬುದ್ಧಿಶಕ್ತಿಯುಳ್ಳವರು ವಿಶ್ವವಿದ್ಯಾ

ನಿಲಯದ ಮೆಟ್ಟಲನ್ನು ಹತ್ತಿದರೆ ಅವರಿಗೆ ಹೆಚ್ಚು ಪ್ರಯೋಜನವಾಗುವುದಿಲ್ಲ. ಕಾಲ ನಷ್ಟವಾಗುತ್ತದೆ. ಹಣ ವ್ಯಯವಾಗುತ್ತದೆ. ನಿರಾಶೆಹೊಂದಿ, ಅಸಮರ್ಥರೆಂಬ ಮನೋಭಾವಕ್ಕೆ ಎಡೆಕೊಟ್ಟು ತಮ್ಮ ವ್ಯಕ್ತಿತ್ವಕ್ಕೆ ಧಕ್ಕೆ ತಂದುಕೊಳ್ಳುತ್ತಾರೆ.

ಮತ್ತೊಂದು ವಿಧದಲ್ಲಿ ಬುದ್ಧಿಶಕ್ತಿ ಪರೀಕ್ಷೆಗಳನ್ನು ಶಾಲೆಯಲ್ಲಿ ಉಪಯೋಗಿಸಬಹುದು. ಕೆಲವು ಬುದ್ಧಿಶಕ್ತಿ ಪರೀಕ್ಷೆಗಳಿಂದ ಬುದ್ಧಿಶಕ್ತಿಯ ಮಟ್ಟ ತಿಳಿಯುವುದರ ಜೊತೆಗೆ ಇತರ ಕೆಲವು ಶಕ್ತಿಗಳನ್ನು ತಿಳಿಯಬಹುದು. ಭಾಷಾಪರೀಕ್ಷಗಳಿಂದ ಭಾಷಾ ಸಾಮರ್ಥ್ಯ (Verbal ability) ಸಂಖ್ಯಾಸಾಮರ್ಥ್ಯ (Numerical ability) ಮೊದಲಾದುವುಗಳನ್ನು ತಿಳಿಯಬಹುದು. ಕೈಕೆಲಸದಿಂದ ಕೂಡಿದ ಪರೀಕ್ಷೆಗಳಲ್ಲಿ, ಉದಾಹರಣೆಗೆ ಅಲೆಗ್ಝಾಂಡರ್‌ರವರು ರಚಿಸಿದ ಪರ್‌ಫಾರ್ಮೆನ್ಸ್ ಸ್ಕೇಲ್ ಪರೀಕ್ಷಣದಲ್ಲಿ (Practical ability ಅಥವಾ 'F' factor) ಕೈಕೆಲಸದ ನಿಪುಣತೆಯನ್ನು ಕಂಡುಹಿಡಿಯಬಹುದು. ಭಾಷಾ ಸಾಮರ್ಥ್ಯದಲ್ಲಿ ವಿಶೇಷ ಸಾಮರ್ಥ್ಯ ಹೊಂದಿ ಜೊತೆಗೆ ಹೆಚ್ಚು 'ಜಿ' ಅಂಶದಿಂದ ಕೂಡಿದವರನ್ನು ಇಂಗ್ಲೆಂಡಿನಲ್ಲಿ ಗ್ರಾಮರ್ ಸ್ಕೂಲ್‌ಗಳಿಗೆ ಸೇರಲು ಸಲಹೆ ಕೊಡುತ್ತಾರೆ. ಪ್ರಾಕ್ಟಿಕಲ್ ಎಬಿಲಿಟಿಯಲ್ಲಿ ಹೆಚ್ಚು ಸಾಮರ್ಥ್ಯವಿದ್ದು ಅಧಿಕವಾದ 'ಜಿ' ಅಂಶದಿಂದ ಕೂಡಿದ್ದರೆ ಅವರನ್ನು ಪಾರಿಭಾಷಿಕ ಶಾಲೆಗೆ ಸೇರಿಸಿಕೊಳ್ಳುತ್ತಾರೆ. "ವಿ" "ಯಫ್" ಮತ್ತು "ಜಿ" ಅಂಶಗಳಲ್ಲಿ ಸಾಮಾನ್ಯ ಶಕ್ತಿಯುಳ್ಳವರನ್ನು ಆಧುನಿಕ ಪಾಠಶಾಲೆಗಳಿಗೆ ಸೇರಿಸಿಕೊಳ್ಳುತ್ತಾರೆ. ಸುಮಾರು ೧೧ ನೆಯ ವಯಸ್ಸಿಗೆ ವಿಶೇಷ ಶಕ್ತಿಗಳು ಒಬ್ಬನಲ್ಲಿ ತಲೆದೋರುತ್ತವೆ. ಅವುಗಳನ್ನು ಅಳೆಯುವುದರ ಮೂಲಕ ಸರಿಯಾದ ಸಲಹೆಗಳನ್ನು ಮಕ್ಕಳಿಗೆ ಕೊಡಲು ಸಾಧ್ಯವಾಗುತ್ತದೆ.

ಕೆಲವು ಮಕ್ಕಳಿಗೆ ಸರಿಯಾಗಿ, ಜಾಗ್ರತೆಯಾಗಿ ಓದಲು ಆಗುವುದಿಲ್ಲ. ಸರಿಯಾಗಿ ಪದಗಳನ್ನು ಬರೆಯಲು ಆಗುವುದಿಲ್ಲ. ಓದಿದ್ದನ್ನು ಅರ್ಥಮಾಡಿಕೊಳ್ಳಲು ಅಸಮರ್ಥರಾಗಿರುತ್ತಾರೆ. ಓದು ಬರವಣಿಗೆಗಳಲ್ಲಿ ತೊಂದರೆಗಳನ್ನು ಅನುಭವಿಸುತ್ತಾರೆ. ಅದಕ್ಕೆ ಕಾರಣಗಳು ಹಲವಾರು ಇರುತ್ತವೆ. ಅವು ಅಸಮರ್ಪಕ ಅಭ್ಯಾಸಗಳಿಂದ ಕೂಡಿದ ಕಲಿಕೆಗೆ ಸಂಬಂಧಪಟ್ಟಿರಬಹುದು. ಇಲ್ಲವೆ ಕಣ್ಣು ಕಿವಿ ನಾಲಗೆ ಮೊದಲಾದ ಇಂದ್ರಿಯಗಳ ದೋಷಕ್ಕೆ ಸಂಬಂಧಪಟ್ಟಿರಬಹುದು. ಅಥವಾ ಭಾವಜೀವನದ ಬೆಳವಣಿಗೆಯಲ್ಲಿ ಸಂಭವಿಸಿದ ತೊಡರುಗಳ ಫಲವಾಗಿಯಾದರೂ ಆಗಬಹುದು. ತಪ್ಪಿದರೆ ಮಂದಬುದ್ಧಿಯೂ ಇದಕ್ಕೆ ಕಾರಣವಾಗಬಹುದು. ಕಾರಣಗಳನ್ನು ಪರಿಶೀಲಿಸುವಾಗ ಬುದ್ಧಿಶಕ್ತಿಯ ಪರೀಕ್ಷೆಗಳು ಪ್ರಯೋಜನಕಾರಿಯಾಗಿರುತ್ತವೆ. ಒಂದು ವೇಳೆ ಓದುಬರಹದಲ್ಲಿ ಒಬ್ಬ ಹುಡುಗನ ಅಸಾಮರ್ಥ್ಯಕ್ಕೆ ಮಂದಬುದ್ಧಿ ಕಾರಣವಾದರೆ ಬುದ್ಧಿಶಕ್ತಿ ಪರೀಕ್ಷೆಗಳಿಂದ ಅದನ್ನು ಸುಲಭವಾಗಿ ಕಂಡುಹಿಡಿಯಬಹುದು.

## ಔದ್ಯೋಗಿಕ ರಂಗದಲ್ಲಿ ಬುದ್ಧಿಶಕ್ತಿ ಪರೀಕ್ಷೆಗಳು

ಯಾವ ದೇಶದಲ್ಲೇ ಆಗಲಿ ಅಲ್ಲಿರುವ ಉದ್ಯೋಗಗಳ ಪಟ್ಟಿಯನ್ನು ತಯಾರಿಸಿದ್ದಾದರೆ ಲಕ್ಷಾಂತರ ಉದ್ಯೋಗಗಳು ಕಂಡುಬರುತ್ತವೆ. ಈ ಉದ್ಯೋಗಗಳನ್ನೆಲ್ಲಾ ವಿಂಗಡಿಸಿದಲ್ಲಿ ಸಾವಿರಾರು ಬೇರೆ ಬೇರೆ ಉದ್ಯೋಗಗಳು ಇರುತ್ತವೆ. ಈ ಉದ್ಯೋಗಗಳಿಗೆಲ್ಲಾ ಒಂದೇ ಮಟ್ಟದ ಬುದ್ಧಿಶಕ್ತಿ ಬೇಕಾಗಿಲ್ಲ. ಕೆಲವಕ್ಕೆ ಹೆಚ್ಚು ಬುದ್ಧಿಶಕ್ತಿ ಬೇಕಾಗುತ್ತದೆ. ಬೇರೆ ಕೆಲವಕ್ಕೆ ಸಾಮಾನ್ಯ ಬುದ್ಧಿಶಕ್ತಿ ಇದ್ದರೆ ಸಾಕು. ಮತ್ತೆ ಕೆಲವು ಕಾಯ

ಕಗಳಿಗೆ ಕಡಮೆ ಬುದ್ಧಿಶಕ್ತಿಯವರು ಸಿಕ್ಕಿದರೆ ಸಾಕಾಗುತ್ತದೆ. ದೇಶದ ಜನರಲ್ಲಿಯೂ ಕೂಡ ಬುದ್ಧಿಶಕ್ತಿ ಗಂಟಾಕೃತಿಯ ರೂಪದಲ್ಲಿ ಪ್ರಸರಿಸಿರುತ್ತದೆ. ಶೇಕಡ ೭೦ ಮಂದಿ ಸಾಧಾರಣ ಬುದ್ಧಿಶಕ್ತಿಯುಳ್ಳವರಾಗಿಯೂ, ಉಳಿದ ೩೦ ರಲ್ಲಿ ೧೫ ಜನ ಹೆಚ್ಚು ಬುದ್ಧಿವಂತರಾಗಿಯೂ ಮಿಕ್ಕ ೧೫ ಜನ ಮಂದಬುದ್ಧಿಯುಳ್ಳವರಾಗಿಯೂ ಇರುವುದನ್ನು ಹಿಂದೆಯೇ ನೋಡಿದ್ದೇವೆ. ವ್ಯಕ್ತಿಗೂ ಮತ್ತು ವೃತ್ತಿಗೂ ಬುದ್ಧಿಶಕ್ತಿಯಲ್ಲಿ ಸರಿಹೋಗುವಂತೆ ಮಾಡಲು ಬುದ್ಧಿಶಕ್ತಿ ಪರೀಕ್ಷೆಗಳ ಆವಶ್ಯಕತೆ ಇರುತ್ತದೆ.

ಒಂದುವೇಳೆ ವ್ಯಕ್ತಿಗೂ ವೃತ್ತಿಗೂ ಬುದ್ಧಿಶಕ್ತಿಯಲ್ಲಿ ತಾರತಮ್ಯವಿದ್ದಲ್ಲಿ ಕೆಲಸ ಸುಗಮವಾಗಿ ನಡೆಯುವುದಿಲ್ಲ. ವೃತ್ತಿಗೆ ಬೇಕಾಗುವ ಬುದ್ಧಿಶಕ್ತಿ ವ್ಯಕ್ತಿಯಲ್ಲಿಲ್ಲದಿದ್ದರೆ ಅಪಹಾಸ್ಯಕ್ಕೀಡಾಗುತ್ತಾನೆ; ಕೀಳು ಮನೋಭಾವನೆಯನ್ನು ಹೊಂದಿ ವ್ಯಸನಕ್ಕೀಡಾಗುತ್ತಾನೆ. ಒಂದುವೇಳೆ ವೃತ್ತಿಗೆ ಬೇಕಾದುದಕ್ಕಿಂತಲೂ ಹೆಚ್ಚು ಬುದ್ಧಿವಂತನಾಗಿದ್ದಲ್ಲಿ ಅವನಲ್ಲಿ ವೃತ್ತಿಯ ಮೇಲೆ ನಿಕೃಷ್ಟಭಾವನೆಯು ಮೂಡುತ್ತದೆ. ವೃತ್ತಿಯನ್ನು ಕಂಡರೆ ತಿರಸ್ಕಾರವುಂಟಾಗುತ್ತದೆ. ಅಂತಹವರು ಕುಚೇಷ್ಟೆಗಳಲ್ಲಿ ತೊಡಗಿ ಇತರರನ್ನು ಕೆಡಿಸುತ್ತಾರೆ. ತಾನು ಕಾಲಿಗೆ ಹಾಕಿಕೊಳ್ಳುವ ಜೋಡು ದೊಡ್ಡದಾಗಿದ್ದರೂ ಅಥವಾ ಚಿಕ್ಕದಾಗಿದ್ದರೂ ನಡೆಯುವುದಕ್ಕಾಗುವುದಿಲ್ಲ. ಅದು ಕಾಲಿಗೆ ಸರಿಹೋದ ಪಕ್ಷದಲ್ಲಿ ಸುಖವಾಗಿ ನಡೆಯಬಹುದು. ಬುದ್ಧಿಶಕ್ತಿಗೆ ಸರಿಹೋಗುವ ವೃತ್ತಿ ಒಬ್ಬನಿಗೆ ಲಭಿಸಿದಲ್ಲಿ ಅವನು ಸಂತೋಷದಿಂದ ತನ್ನ ಕೆಲಸವನ್ನು ಮಾಡಿಕೊಂಡು ಹೋಗುತ್ತಾನೆ. ಆ ಕೆಲಸವನ್ನೂ ಕೂಡ ಗೌರವದಿಂದ ಕಾಣುತ್ತಾನೆ.

ಆ ಕೆಲಸದಲ್ಲಿ ಸುಖ ಶಾಂತಿ ಎರಡನ್ನೂ ಕಾಣುತ್ತಾನೆ. ಷೇಕ್ಸ್‌ಪಿಯರ್ ಕವಿಯು ಒಂದು ಕಡೆ 'ನಗುತ್ತಿರುವ ಮಕ್ಕಳೂ ಪ್ರೀತಿಸುತ್ತಿರುವ ಹೆಂಡತಿಯೂ ಸುಂದರವಾದ ಜೀವನದ ಸುಖಗಳು' ಎಂದು ಹೇಳಿದ್ದಾನೆ. ಈ ವಾಕ್ಯಕ್ಕೆ 'ತನ್ನ ಶಕ್ತಿಗೆ ಸರಿಹೋಗುವ ವೃತ್ತಿಯೂ ಕೂಡ' ಎಂದು ಸೇರಿಸಿದರೆ ತಪ್ಪಾಗಲಾರದು. ಜೀವಮಾನದ ಹೆಚ್ಚು ಭಾಗವನ್ನು ನಮ್ಮ ವೃತ್ತಿಯಲ್ಲಿ ಕಳೆಯುತ್ತೇವೆ. ನಮ್ಮ ಸ್ನೇಹಿತರು ನಾವು ಆಡುವ ಮಾತುಕತೆ ಹೆಚ್ಚು ಕಡಮೆ ವೃತ್ತಿಗೆ ಸಂಬಂಧಪಟ್ಟಂತಿರುತ್ತದೆ. ಜೀವನದಲ್ಲಿ ವೃತ್ತಿ, ಚಕ್ರದ ಕುಂಭವಿದ್ದಂತೆ ಇರುತ್ತದೆ. ಪ್ರತಿಯೊಂದು ಅದರ ಸುತ್ತ ಹೊಂದಿಕೊಂಡಿರುತ್ತದೆ.

ಬರ್ಟ್ಟರವರು ಸಂಶೋಧನೆಗಳ ಆಧಾರದ ಮೇಲೆ ಯಾವ ಉದ್ಯೋಗದ ದರ್ಜೆಗೆ ಬುದ್ಧಿಶಕ್ತಿ ಎಷ್ಟು ಇರಬೇಕೆಂಬ ಪಟ್ಟಿಯನ್ನು ರಚಿಸಿದ್ದಾರೆ. ಅದನ್ನು ಪಟ್ಟಿ ೧೨ ರಲ್ಲಿ ಕೊಡಲಾಗಿದೆ.

ಪಟ್ಟಿ ೧೨ (೭–೪೮೩)

| ವೃತ್ತಿಯ ದರ್ಜೆ | ಬುದ್ಧಿ ಪ್ರಮಾಣ (ಐ. ಕ್ಯು) |
|---|---|
| ಉನ್ನತ ಉದ್ಯೋಗಗಳು .... | ೧೫೦ರ ಮೇಲೆ |
| ಉಪಾಧ್ಯಾಯರು ಮತ್ತು ಮೇಲ್ದರ್ಜೆಯ ಗುಮಾಸ್ತರು .... | ೧೩೦—೧೫೦. |
| ಕುಶಲ ಕೆಲಸಗಾರರು ಮತ್ತು ಸಾಮಾನ್ಯ ದರ್ಜೆಯ ಗುಮಾಸ್ತರು .... | ೧೧೫—೧೩೦. |
| ವ್ಯಾಪಾರಸ್ಥರು, ಕುಶಲ ಕೆಲಸದ ಕಾರ್ಮಿಕರು .... | ೧೦೦—೧೧೫. |

ಕಡಮೆ ಕುಶಲತೆಯ
ಕೆಲಸಗಾರರು .... ೮೫—೧೦೦.
ಕುಶಲತೆಯಿಲ್ಲದ ಕೆಲಸದವರು .... ೭೦—೮೫.
ಮನೆಯಲ್ಲಿ ಕೂಲಿಕೆಲಸ
ಮಾಡುವವರು .... ೫೦— ೭೦.
ಸರ್ಕಾರ ನಡೆಸುವ ವಿಶೇಷ
ಗೃಹಗಳಲ್ಲಿ ವಾಸಮಾಡತಕ್ಕ
ವರು. (ಇವರಿಂದ ಯಾವ
ಕೆಲಸ ಮಾಡಲು ಸಾಧ್ಯವಿಲ್ಲ.
ಇವರನ್ನು ಎಳೆಯ ಮಕ್ಕಳಂತೆ
ಸಲಹಬೇಕು.) .... ೫೦ರ ಕೆಳಗೆ.



ಬರ್ಟ್‌ರವರ ಪಟ್ಟಿಯು ಬಹಳ ಆದರ್ಶಪ್ರಾಯವಾಗಿದೆ, ಎಂದು ಕೆಲವರು ಅಭಿಪ್ರಾಯಪಡುತ್ತಾರೆ.

ಮತ್ತೆ ಕೆಲವು ವೈಜ್ಞಾನಿಕರು ಅನೇಕ ಉದ್ಯೋಗಗಳಲ್ಲಿ ಕೆಲಸಮಾಡುತ್ತಿರುವ ಸಾವಿರಾರು ಮಂದಿಯನ್ನು ಪರೀಕ್ಷಿಸಿ ಪ್ರತಿಯೊಂದು ಉದ್ಯೋಗಕ್ಕೂ ಸರಾಸರಿ ಬುದ್ಧಿಪ್ರಮಾಣ ಎಷ್ಟಿರಬೇಕೆಂಬ ನಿರ್ಧಾರಕ್ಕೆ ಬಂದಿದ್ದಾರೆ. ಕ್ಯಟೇಲ್‌ರವರು ತಯಾರಿಸಿದ ಅಂತಹ ಪಟ್ಟಿಯೊಂದನ್ನು ಮುಂದಿನ ಪಟ್ಟಿಯಲ್ಲಿ ಕೊಡಲಾಗಿದೆ.

ಪಟ್ಟಿ ೧೩. ಉದ್ಯೋಗದ ಮಟ್ಟ ಮತ್ತು ಬುದ್ಧಿಶಕ್ತಿಯ ಸರಾಸರಿ (೧೨—೨೦೭)

| ಉದ್ಯೋಗ | ಬುದ್ಧಿಪ್ರಮಾಣದ ಸರಾಸರಿ. |
|---|---|
| ಸಾಮಾನನ್ನು ಕಟ್ಟುವವರು .... | ೭೮. |
| ವೆಲ್ಡರ್ .... | ೮೭. |

ಹೀಗೆ ವಿದೇಶಗಳಲ್ಲಿ ಪ್ರತಿಯೊಂದು ಉದ್ಯೋಗಕ್ಕೂ ಬೇಕಾಗುವ ಬುದ್ಧಿಶಕ್ತಿಯ ಮಟ್ಟವನ್ನು ನಿರ್ಧರಿಸಿದ್ದಾರೆ. ಮಕ್ಕಳ ಬುದ್ಧಿಶಕ್ತಿಯನ್ನು ಅಳೆದು ಅವರ ಶಕ್ತಿಗೆ ಸರಿಹೋಗುವ ಉದ್ಯೋಗಗಳನ್ನು ಆರಿಸಿಕೊಳ್ಳುವುದು ಇಂತಹ ಪಟ್ಟಿಗಳ ಸಹಾಯದಿಂದ ಸುಲಭವಾಗುತ್ತದೆ. ವ್ಯಕ್ತಿಗಳ ಆಯ್ಕೆಗೆ ಬುದ್ಧಿ ಪ್ರಮಾಣದ ನಿರ್ಧಾರ ಒಂದೇ ಸಾಲದು. ವ್ಯಕ್ತಿಯ ವಿಶೇಷ ಶಕ್ತಿಗಳ ಮಾಪನ, ಪ್ರಾವೀಣ್ಯ, ಅಭಿರುಚಿ, ಆಸಕ್ತಿ, ವ್ಯಕ್ತಿಯ ಲೋಪದೋಷಗಳು, ಇವೇ ಮೊದಲಾದುವುಗಳನ್ನು ಗಮನಿಸಿ ವ್ಯಕ್ತಿಗೆ ತಕ್ಕ ವೃತ್ತಿಯನ್ನು ಸಲಹೆ ಮಾಡಬೇಕಾಗಿದೆ. ಇದರಲ್ಲಿ ಬುದ್ಧಿಶಕ್ತಿಯ ಪರೀಕ್ಷೆಗಳ ಉಪಯೋಗ ಅಮೂಲ್ಯವಾಗಿರುತ್ತದೆ. ಒಬ್ಬನು ಬುದ್ಧಿಪ್ರಮಾಣವನ್ನು ಕಂಡುಹಿಡಿದು ಅವನ ಶಕ್ತಿಗೆ ಮೀರಿದ ಮತ್ತು ಅವನ ಮಟ್ಟಕ್ಕೆ ಕಡಮೆ ದರ್ಜೆಯ ಕೆಲಸಗಳನ್ನು ಒತ್ತಟ್ಟಿಗೆ ಬಿಟ್ಟು ಬಿಡಬಹುದು. ಅವನ ಬುದ್ಧಿ ಶಕ್ತಿಗೆ ಸರಿಹೋಗುವ ಕೆಲಸಗಳನ್ನು ಮಾತ್ರ ಗಣನೆಗೆ ತೆಗೆದು ಕೊಂಡು ಅವುಗಳಲ್ಲಿ ಅವನ ಶಕ್ತಿ, ಸಾಮರ್ಥ್ಯ, ಅಭಿರುಚಿ ಗಳಿಗೆ ಸರಿಹೋಗುವ ಉದ್ಯೋಗಗಳನ್ನು ಸೇರುವಂತೆ ಸಲಹೆ ಮಾಡಬೇಕು.

ಬುದ್ಧಿಶಕ್ತಿಯ ಪರೀಕ್ಷೆಗಳನ್ನು ಕಾರ್ಖಾನೆಗಳಲ್ಲಿ ಉದ್ಯೋಗ ಗಳಿಗೆ ಜನರನ್ನು ಆರಿಸಿಕೊಳ್ಳುವಾಗ ಉಪಯೋಗಿಸಬಹುದು. ಒಂದು ಉದ್ಯೋಗಕ್ಕೆ ಹಲವಾರು ಜನರು ಅಭ್ಯರ್ಥಿಗಳಾಗಿ ಬಂದಾಗ ಅವರ ಬುದ್ಧಿಶಕ್ತಿಯನ್ನು ಅಳೆದು ಉದ್ಯೋಗಕ್ಕೆ ಸರಿಹೋಗುವವರನ್ನರಿತು ಅನಂತರ ಅವರನ್ನು ಭೇಟಿಮಾಡಿ ಉದ್ಯೋಗಕ್ಕೆ ಬೇಕಾಗುವ ಇತರ ಶಕ್ತಿ ಸಾಮರ್ಥ್ಯಗಳು, ನೈಪುಣ್ಯ, ಆಸಕ್ತಿ ಅವರಲ್ಲೆಷ್ಟು ಜನಕ್ಕಿವೆ ಎಂದು ತಿಳಿದು ಸರಿ

ಹೋಗುವನೊಬ್ಬನನ್ನು ಖಾಲಿ ಇರುವ ಉದ್ಯೋಗಕ್ಕೆ ನಿಯಮಿಸಿಕೊಳ್ಳಬಹುದು. ವಿದೇಶಗಳಲ್ಲಿ ಈ ಪದ್ಧತಿಯನ್ನು ಹೆಚ್ಚಾಗಿ ಉಪಯೋಗಿಸಿಕೊಳ್ಳುತ್ತಿದ್ದಾರೆ. ಇದರಿಂದ ಉದ್ಯಮಕ್ಕೂ ಕೆಲಗಾರರಿಗೂ ಒಳ್ಳೆಯದಾಗಿರುತ್ತದೆ; ದೇಶದಲ್ಲಿ ಉತ್ಪತ್ತಿ ಹೆಚ್ಚಾಗಲು ಅನುಕೂಲವಾಗುತ್ತದೆ.

## ಮಾನಸಿಕ ಚಿಕಿತ್ಸಾಲಯಗಳಲ್ಲಿ ಬುದ್ಧಿಶಕ್ತಿ ಪರೀಕ್ಷೆಗಳು

ವೈದ್ಯರುಗಳು ಆಸ್ಪತ್ರೆಯಲ್ಲಿ ಒಬ್ಬ ರೋಗಿಯ ರೋಗವನ್ನು ಅರಿಯುವ ಮೊದಲು ಅವನ ನಾಡಿ, ಶ್ವಾಸಕೋಶಗಳನ್ನು ಪರೀಕ್ಷಿಸಿ ಅನಂತರ ಅವನ ರೋಗಕ್ಕೆ ಕಾರಣಗಳನ್ನು ತಿಳಿಯುತ್ತಾರೆ. ಅದೇ ರೀತಿಯಲ್ಲಿ ಚಿಕಿತ್ಸಾಲಯಗಳಿಗೆ ಬಂದ ಮಾನಸಿಕ ರೋಗಿಗಳಿಗೆ ಮೊದಲು ಬುದ್ಧಿಶಕ್ತಿಯ ಪರೀಕ್ಷೆಗಳನ್ನು ಕೊಡುವುದು ವಿದೇಶಗಳಲ್ಲಿ ಸಾಂಪ್ರದಾಯಕವಾಗಿದೆ. ತಂದೆತಾಯಿಗಳು ಮಗುವೊಂದನ್ನು ಮನೋವೈಜ್ಞಾನಿಕನಲ್ಲಿಗೆ ಕರೆದುಕೊಂಡು ಹೋಗಿ ಅದರಲ್ಲಾಗಿರುವ ಮಾನಸಿಕ ವೈಪರೀತ್ಯವನ್ನು ತಿಳಿಸುತ್ತಾರೆ. ಅದು ಆವರಣಕ್ಕೆ ಸರಿಯಾಗಿ ಹೊಂದಿಕೊಳ್ಳುತ್ತಿಲ್ಲವೆಂದು ಹೇಳುತ್ತಾರೆ. ಅದರ ವರ್ತನೆಯನ್ನು ಸರಿಪಡಿಸಕೊಡಬೇಕೆಂದು ಪ್ರಾರ್ಥಿಸಿಕೊಳ್ಳುತ್ತಾರೆ. ಮಕ್ಕಳ ಮನಶ್ಶಾಸ್ತ್ರದ ಪುಸ್ತಕವೊಂದರಲ್ಲಿ ಕೊಟ್ಟಿರುವ ಉದಾಹರಣೆಯೊಂದನ್ನು ಇಲ್ಲಿ ಸೂಚಿಸಬಹುದು. ಹೆಣ್ಣು ಮಗಳೊಬ್ಬಳು, ಪ್ರೌಢಶಾಲೆಯ ಮೊದಲನೆಯ ತರಗತಿಯವರೆಗೂ ಸರಿಯಾಗಿ ಓದಿಕೊಂಡು ಪ್ರತಿ ತರಗತಿಯಲ್ಲಿಯೂ ಉತ್ತೀರ್ಣಳಾಗಿ ಮುಂದುವರಿಯುತ್ತಿದ್ದಳು. ಆದರೆ ಪ್ರೌಢಶಾಲೆಯ ಮೊದಲನೆಯ ತರಗತಿಯಲ್ಲಿ ೩–೪ ಸಲ ಪರೀಕ್ಷೆಗೆ

ಹೋಗಿ ಉತ್ತೀರ್ಣಳಾಗದೆ ಅದೇ ತರಗತಿಯಲ್ಲಿ ಓದುತ್ತಿರ ಬೇಕಾಯಿತು. ತಂದೆತಾಯಿಗಳು ಗಾಬರಿಪಟ್ಟು ಆ ಹುಡುಗಿ ಯನ್ನು ಮನೋವೈಜ್ಞಾನಿಕನಲ್ಲಿಗೆ ಕರೆದುಕೊಂಡುಹೋದರು. ಇಂತಹ ಸನ್ನಿವೇಶದಲ್ಲಿ ಮನೋವೈಜ್ಞಾನಿಕನು ಆ ಹುಡುಗಿಯ ವರ್ತನೆಯ ಚರಿತ್ರೆಯನ್ನು ವಿಶದವಾಗಿ ತಿಳಿದುಕೊಂಡು, ಬುದ್ಧಿಶಕ್ತಿ ಪರೀಕ್ಷೆಗಳನ್ನು ಕೊಡಬೇಕಾಗುತ್ತದೆ. ಒಂದು ವೇಳೆ ಹುಡುಗಿಯು ಮಂದಬುದ್ಧಿಯವಳಾಗಿದ್ದ ಪಕ್ಷದಲ್ಲಿ ಪ್ರೌಢಶಾಲೆ ಯಲ್ಲಿ ಹೇಳಿಕೊಡುವ ಪಾಠಗಳನ್ನು ಅರ್ಥಮಾಡಿಕೊಂಡು ಮುಂದುವರಿಯಲು ಕಷ್ಟವಾಗುತ್ತದೆ. ಬುದ್ಧಿಶಕ್ತಿಯ ಪರೀಕ್ಷೆ ಗಳು ಹುಡುಗಿಯು ಬುದ್ಧಿವಂತಳೇ ಅಲ್ಲವೇ ಎಂಬುದನ್ನು ತಿಳಿಸುತ್ತವೆ. ಹುಡುಗಿಯು ಮಂದಬುದ್ಧಿಯವಳಲ್ಲದ ಪಕ್ಷದಲ್ಲಿ ಅವಳ ವರ್ತನೆಗೆ ಬೇರೆ ಕಾರಣಗಳಿರಬೇಕೆಂದು ಊಹಿಸಿ, ನಿಜ ವಾದ ಕಾರಣಗಳನ್ನು ಕಂಡುಹಿಡಿಯಲು ಪ್ರಯತ್ನಿಸಬೇಕು. ಈಗಿನ ಉದಾಹರಣೆಯಲ್ಲಿ ಹುಡುಗಿಯು ದಡ್ಡಳಾಗಿರಲಿಲ್ಲ. ಆ ಹುಡುಗಿಗೆ ಸಹೋದರಿಯರಿದ್ದರು. ಅವಳು ಮನೆಯಲ್ಲಿ ಹಿರಿಯ ಮಗಳಾಗಿದ್ದಳು. ಬೇರೆ ಮಕ್ಕಳು ಹುಟ್ಟಿದ ಮೇಲೆ ಅವರನ್ನು ಹೆಚ್ಚಾಗಿ ಪ್ರೀತಿಸುತ್ತಾ, ಹಿರಿಯುವಳನ್ನು ಹೀಯಾಳಿ ಸುತ್ತಿದ್ದರು. ಅವಳು ಏನನ್ನು ಹೇಳಿದರೂ ಅವಮಾನ ಮಾಡುತ್ತಿದ್ದರು. ಇದರಿಂದ ಅವಳಲ್ಲಿ ಕೀಳು ಮನೋಭಾವನೆ ಯುಂಟಾಗಿ, ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರ ಗೊತ್ತಿದ್ದರೂ ಹೇಳುವುದಕ್ಕೆ ಅಂಜುತ್ತಿದ್ದಳು. ಶಾಲೆಯಲ್ಲಿಯೂ ಉಪಾಧ್ಯಾ ಯಿನಿಯರು ಹೀಯಾಳಿಸಬಹುದೆಂಬ ಅಂಜಿಕೆಯಿಂದ ಉತ್ತರ ಗಳನ್ನೇ ಕೊಡುತ್ತಿರಲಿಲ್ಲ. ಇದನ್ನರಿತ ಮನೋವೈಜ್ಞಾನಿಕನು ತಂದೆತಾಯಿಗಳಿಗೆ ಮಗಳ ವಿಚಾರವಾಗಿ ಹೇಗೆ ನಡೆದುಕೊಳ್ಳ

ಬೇಕೆಂದು ಬುದ್ಧಿವಾದ ಹೇಳಿ ಆದಷ್ಟು ಮಟ್ಟಿಗೆ ಅವಳಿಗೆ ಪ್ರೀತಿಯನ್ನು ತೋರಿಸಿ ಅವಳು ಹೇಳುವ ಒಳ್ಳೆ ಉತ್ತರಗಳಿಗೆ ಮೆಚ್ಚಿಗೆಯನ್ನು ಪ್ರದರ್ಶಿಸಿ ಉತ್ತೇಜನ ಕೊಡುವಂತೆ ಹೇಳಿದನು. ಅಂದಿನಿಂದ ಹುಡುಗಿಯು ತನ್ನ ಮುಂದಿನ ವಿದ್ಯಾಭ್ಯಾಸದಲ್ಲಿ ಪ್ರಗತಿಯನ್ನು ಹೊಂದುತ್ತಿದ್ದಳು.

ವಯಸ್ಕರಲ್ಲಿಯೂ ಕೂಡ ಅವರು ಆವರಣಕ್ಕೆ ಸರಿಯಾಗಿ ಹೊಂದಿಕೊಳ್ಳದಿದ್ದಲ್ಲಿ ಅದು ಮಂದಬುದ್ಧಿಗೆ ಸಂಬಂಧಪಟ್ಟದ್ದೋ ಅಥವಾ ಭಾವ ಜೀವನದ ಎಡರು ತೊಡರುಗಳಿಗೆ ಸಂಬಂಧಪಟ್ಟದ್ದೋ ಎಂಬುವನ್ನು ತಿಳಿಯಲು ಬುದ್ಧಿಶಕ್ತಿಯ ಪರೀಕ್ಷೆಗಳು ಉಪಯುಕ್ತವಾಗಿರುತ್ತವೆ.

ಕೆಲವು ಮಾನಸಿಕ ರೋಗಗಳ ನಿರ್ಧಾರಣೆಯಲ್ಲಿ ಬುದ್ಧಿಶಕ್ತಿಯ ಪರೀಕ್ಷೆಗಳು ಸಹಾಯವಾಗುತ್ತವೆ. ವೆಕ್ಸಲರ್‌ರವರ ಪರೀಕ್ಷೆಯನ್ನು ಉದಾಹರಣೆಗಾಗಿ ತೆಗೆದುಕೊಳ್ಳಬಹುದು. ವೈಜ್ಞಾನಿಕರು ವೆಕ್ಸಲರ್ ಪರೀಕ್ಷೆಯನ್ನುಪಯೋಗಿಸಿ ಅನೇಕ ಪರಿಶೋಧನೆಗಳನ್ನು ಮಾಡಿದ್ದಾರೆ. ಈ ಪರಿಶೋಧನೆಗಳಲ್ಲಿ ಉಪಪರೀಕ್ಷೆಗಳಲ್ಲಿ ಪಡೆದ ಅಂಕಗಳು, ಭಾಷಾವರ್ಗದ ಪರೀಕ್ಷಣಗಳ ಐ. ಕ್ಯು. ಮತ್ತು ಭಾಷಾರಹಿತ ಪರೀಕ್ಷಣಗಳ ಐ. ಕ್ಯು. ವನ್ನು ಗಣನೆಗೆ ತೆಗೆದುಕೊಳ್ಳುತ್ತಾರೆ. ಮೆದುಳಿನ ಕೆಲವು ಭಾಗಗಳ ನಾಶ, 'ಸ್ಕಿಜೋಫ್ರೇನಿಯ' ಎಂಬ ಮಾನಸಿಕ ರೋಗ ಮತ್ತು ನರಗಳ ದುರ್ಬಲತೆಯಿಂದ ನರಳುವವರು, ಭಾಷಾರಹಿತ ಪರೀಕ್ಷಣಗಳ ಐ. ಕ್ಯು. ವಿಗಿಂತ ಭಾಷಾವರ್ಗದ ಪರೀಕ್ಷಣಗಳಲ್ಲಿ ಹೆಚ್ಚು ಐ. ಕ್ಯು. ಪಾಯಿಂಟ್ಗಳನ್ನು ತೆಗೆಯುತ್ತಾರೆ. ವೆಕ್ಸಲರ್‌ರವರು ತಿಳಿಸುವಂತೆ ಇಲ್ಲಿ ಕೊಟ್ಟಿರುವ ಸಂಜ್ಞೆಗಳಿಂದ ಒಬ್ಬನು 'ಸ್ಕಿಜೋಫ್ರೇನಿಯ'

ಕಾಯಿಲೆಯಿಂದ ನರಳುತ್ತಿರುವನೆಂದು ಊಹಿಸಬಹುದು. ಆ ಸಂಜ್ಞೆಗಳು ಯಾವುವೆಂದರೆ ಕೈಕೆಲಸದಿಂದ ಕೂಡಿದ ಪರೀಕ್ಷಣಗಳಿಗಿಂತಲೂ ಭಾಷಾಪರೀಕ್ಷೆಗಳಲ್ಲಿ ಹೆಚ್ಚು ಅಂಕಗಳನ್ನು ಪಡೆಯುವುದು, ಭಾಷಾಪರೀಕ್ಷೆಗಳಲ್ಲಿ ವಾರ್ತಾಸಂಗ್ರಹಣ ಮತ್ತು ಭಾಷಾಜ್ಞಾನ ಪರೀಕ್ಷಣಗಳಲ್ಲಿ ಹೆಚ್ಚು ಅಂಕಗಳನ್ನು ತೆಗೆಯುವುದು, ಅಂಕಗಳ ಜ್ಞಾಪಕಶಕ್ತಿ ಘನಾಕೃತಿ ನಿರ್ಮಾಣದಲ್ಲಿ ಸಾಧಾರಣದಿಂದ ಕಡಮೆ ಅಂಕಗಳು ಮತ್ತು ಪದಾರ್ಥಗಳ ಜೋಡಣೆ ಅಂಕ,–ಸಂಕೇತಗಳ ಪರೀಕ್ಷೆಯಲ್ಲಿ ಅತ್ಯಲ್ಪ ಅಂಕಗಳನ್ನು ಹೊಂದಿರುವುದಾಗಿದೆ (೪–೧೪೭). ಒಂದು ವಿಷಯವನ್ನು ನಾವು ಗಮನಿಸಬೇಕಾಗಿದೆ. ಈ ಪರೀಕ್ಷೆಗಳೆಲ್ಲವೂ ಸೂಚನೆ ಮಾತ್ರ ಕೊಡುತ್ತವೆ. ಇತರ ಕೆಲವು ಚಿಕಿತ್ಸೆಯ ಪರೀಕ್ಷೆಗಳು ಆ ಸೂಚನೆಯನ್ನು ಸಮರ್ಥಿಸಿದಲ್ಲಿ ರೋಗದ ವಿಷಯದಲ್ಲಿ ನಿರ್ಧಾರಕ್ಕೆ ಬರಲು ಸಾಧ್ಯವಾಗುತ್ತದೆ. ಯಾವುದೋ ಒಂದು ಸಂಜ್ಞೆಯ ಆಧಾರದ ಮೇಲೆ ತೀರ್ಮಾನಕ್ಕೆ ಬರುವುದು ಉಚಿತವಲ್ಲ.

## ಸೇನೆ ಮತ್ತು ಬುದ್ಧಿಶಕ್ತಿಯ ಪರೀಕ್ಷೆಗಳು

ಮೊದಲನೆಯ ಮಹಾಯುದ್ಧದ ಪ್ರಚೋದನೆಯಿಂದ ಬುದ್ಧಿಶಕ್ತಿಯ ಪರೀಕ್ಷೆಗಳ ಬೆಳವಣಿಗೆ ಬಹಳ ಮುಂದೆ ಸಾಗಿತು. ಸಾಕಾದಷ್ಟು ಉತ್ತೇಜನ ದೊರಕಿತು. ಸೈನ್ಯದಲ್ಲಿ ಬುದ್ಧಿಶಕ್ತಿ ಪರೀಕ್ಷೆಗಳ ಉಪಯೋಗವನ್ನು ಕಂಡು ಇತರ ಸಂಸ್ಥೆಗಳಲ್ಲಿಯೂ ಅವುಗಳನ್ನುಪಯೋಗಿಸಲು ಪ್ರಾರಂಭಿಸಿದರು. ವರ್ತಮಾನಕಾಲದಲ್ಲಿ ಸಾಮಾನ್ಯವಾಗಿ ಎಲ್ಲಾ ದೇಶಗಳಲ್ಲಿಯೂ ಸೈನ್ಯಕ್ಕೆ ಅಧಿಕಾರಿಗಳನ್ನು ನಿಯಮಿಸುವಾಗ

ಬುದ್ಧಿಶಕ್ತಿ ಪರೀಕ್ಷೆಗಳನ್ನು ಉಪಯೋಗಿಸುತ್ತಿದ್ದಾರೆ. ನಮ್ಮ ದೇಶದಲ್ಲಿಯೂ ಕೆಲವು ಕಡೆ ಸಿಪಾಯಿಗಳನ್ನು ಮತ್ತು ಅಧಿಕಾರಿಗಳನ್ನು ಆರಿಸಿಕೊಳ್ಳುವ ಕೇಂದ್ರಗಳಿವೆ. ಬೆಂಗಳೂರಿನಲ್ಲಿಯೂ ಒಂದು ಇದೆ. ಈ ಕೇಂದ್ರಗಳಲ್ಲಿ ಮನೋವೈಜ್ಞಾನಿಕರನ್ನು ನೇಮಿಸಿಕೊಂಡಿದ್ದಾರೆ. ಇವರು ಮನಶ್ಶಾಸ್ತ್ರಕ್ಕೆ ಸಂಬಂಧಪಟ್ಟ ಪರೀಕ್ಷೆಗಳನ್ನು ಕೊಟ್ಟು, ಅಭ್ಯರ್ಥಿಗಳ ವಿಚಾರವಾಗಿ ತಮ್ಮ ಅಭಿಪ್ರಾಯವನ್ನು ಕೊಡುತ್ತಾರೆ. ಅವರ ಅಭಿಪ್ರಾಯ ಬೆಲೆಯುಳ್ಳದ್ದಾಗಿರುತ್ತದೆ.

ಸೈನ್ಯಕ್ಕೆ ಸೇರುವ ಪ್ರತಿಯೊಬ್ಬ ಅಧಿಕಾರಿಯೂ, ಅವನು ಲೆಫ್ಟಿನೆಂಟ್ ಆಗಿರಲಿ, ಕ್ಯಾಪ್ಟನ್ ಆಗಿರಲಿ ಅಥವಾ ಕರ್ನಲ್ ಆಗಿರಲಿ ತನ್ನ ಕೆಲಸವನ್ನು ಜಾಣ್ಮೆಯಿಂದ ನಡಸಿಕೊಂಡು ಹೋಗಬೇಕಾಗುತ್ತದೆ. ಕಠಿಣ ಸಮಸ್ಯೆಯೊಂದೊದಗಿದಾಗ ಜವಾಬ್ದಾರಿಯಿಂದಲೂ ಚತುರತೆಯಿಂದಲೂ ಕಾರ್ಯಸಾಧನೆ ಮಾಡಬೇಕಾಗುತ್ತದೆ. ಜೊತೆಗೆ ಸೈನಿಕರನ್ನು ಅಧೀನದಲ್ಲಿಟ್ಟುಕೊಂಡು ಅವರಿಗೆ ಸರಿಯಾದ ತರಪೇತನ್ನು ಕೊಡಬೇಕಾಗುತ್ತದೆ. ಆದ್ದರಿಂದ ಜವಾಬ್ದಾರಿಯುಳ್ಳ ಕೆಲಸಗಳಿಗೆ ಜನರನ್ನು ನೇಮಿಸಿಕೊಳ್ಳುವಾಗ, ಅವರ ಶಕ್ತಿ ಸಾಮರ್ಥ್ಯಗಳಿಗೆ ವಿಶೇಷವಾಗಿ ಗಮನಕೊಡಬೇಕಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಬುದ್ಧಿಶಕ್ತಿ ಪರೀಕ್ಷೆಗಳನ್ನು ಉಪಯೋಗಿಸುತ್ತಾರೆ.

ಸಿಪಾಯಿಗಳ ವಿಂಗಡಣೆಯಲ್ಲಿಯೂ ಬುದ್ಧಿಶಕ್ತಿ ಪರೀಕ್ಷೆಗಳನ್ನುಪಯೋಗಿಸುತ್ತಾರೆ. ಸೈನ್ಯದಲ್ಲಿ ಅನೇಕ ವಿಭಾಗಗಳಿವೆ. ಕಾಲುವಳ (Infantry) ಅಶ್ವದಳ (Cavalry) ಯಂತ್ರದಳ (Armoured corps) ಶಿಲ್ಪಿದಳ (Engineering corps) ಸಾಮಾನನ್ನು ಸಾಗಿಸುವ ದಳ, ಜೊತೆಗೆ ನಾವಿಕ ಸೈನ್ಯ

(Navy) ಮತ್ತು ವಾಯುಸೈನ್ಯ (Air force) ಹೀಗೆ ಹಲವಾರು ಭಾಗಗಳು ಕಂಡುಬರುತ್ತವೆ. ಈ ದಳಗಳನ್ನು ಬುದ್ಧಿಶಕ್ತಿ, ನೈಪುಣ್ಯ, ಸಾಮರ್ಥ್ಯ ಮೊದಲಾದ ಶಕ್ತಿಗಳು ಮತ್ತು ವ್ಯಕ್ತಿತ್ವದ ಆಧಾರದ ಮೇಲೆ ವಿಂಗಡಿಸಿದಲ್ಲಿ, ಆಗ ಪ್ರತಿಯೊಂದು ದಳವೂ ದಕ್ಷತೆಯಿಂದಿರಲು ಸಾಧ್ಯವಾಗುತ್ತದೆ. ಕೆಲಸಗಳು ಸುಗಮವಾಗಿ ಜರುಗುತ್ತವೆ. ಅಮೇರಿಕಾ ದೇಶದ ರಕ್ಷಣಾ ಇಲಾಖೆಯವರು ಮನಶ್ಶಾಸ್ತ್ರಜ್ಞರ ಸಹಾಯದಿಂದ ವಿಪುಲವಾಗಿ ಈ ಮಾರ್ಗದಲ್ಲಿ ಸಂಶೋಧನೆಗಳನ್ನು ನಡೆಯಿಸಿ ಜಾರಿಗೆ ತಂದಿದ್ದಾರೆ. ಪುಸ್ತಕಗಳು ವರದಿಗಳು ಮತ್ತು ಲೇಖನ ರೂಪವಾಗಿ ಅವರು ನಡೆಯಿಸಿದ ಸಂಶೋಧನೆಗಳನ್ನು ಪ್ರಚುರ ಪಡಿಸಿದ್ದಾರೆ. ಮುಖ್ಯವಾದ ಸಂಶೋಧನೆಗಳನ್ನು ಕಾದಿಡ ಲಾಗಿದೆ.

ಮತ್ತೊಂದು ರೀತಿಯಾಗಿ ಬುದ್ಧಿಶಕ್ತಿ ಪರೀಕ್ಷೆಗಳನ್ನು ಸೈನ್ಯದಲ್ಲಿ ಉಪಯೋಗಿಸಬಹುದು. ಸಿಪಾಯಿಗಳಿಗೆ ತರಪೇತನ್ನು ಕೊಡಲು ಅವರನ್ನು ಗುಂಪುಗಳನ್ನಾಗಿ ವಿಂಗಡಿಸುವಾಗ ಬುದ್ಧಿಶಕ್ತಿ ಪರೀಕ್ಷೆಗಳು ಉಪಯೋಗವಾಗುತ್ತವೆ. ಕೆಲವರು ಬಹಳ ಜಾಗ್ರತೆಯಾಗಿ ಕಲಿತುಕೊಳ್ಳುತ್ತಾರೆ. ಇನ್ನು ಕೆಲವರು ಮೂರು ನಾಲ್ಕು ಸಲ ತಿಳಿಸಿದ ಮೇಲೆ ಕಲಿಯುತ್ತಾರೆ. ಮತ್ತೆ ಕೆಲವರಿಗೆ ಹೇಳಿದ್ದನ್ನು ಅನೇಕ ಸಲ ತಿಳಿಸಿ ಅವರ ಕೈಯಲ್ಲಿ ಮಾಡಿಸಬೇಕಾಗುತ್ತದೆ. ಬುದ್ಧಿವಂತರನ್ನು ಒಂದು ಗುಂಪಾಗಿಯೂ, ಸಾಮಾನ್ಯ ಬುದ್ಧಿಶಕ್ತಿಯುಳ್ಳವರನ್ನು ಮತ್ತೊಂದು ಗುಂಪಾಗಿಯೂ ಕಡಮೆ ಬುದ್ಧಿಶಕ್ತಿಯುಳ್ಳವರನ್ನು ಮಗದೊಂದು ಗುಂಪಾಗಿಯೂ ವಿಂಗಡಿಸಿ, ಸರಿಯಾದ ಶಿಕ್ಷಕರನ್ನು ನೇಮಿಸಿ, ಶಕ್ತಿಗೆ ಸರಿಹೋಗುವ ಶಿಕ್ಷಣವಿಧಾನವನ್ನು ಅನು

ಸರಿಸಿದರೆ ಒಳ್ಳೆಯದಾಗಿರುತ್ತದೆ. ಇದರಿಂದ ಕಾಲ, ಹಣ, ಮತ್ತು ಮಾನವಶಕ್ತಿ ಮಿಗಿಸಿದಂತಾಗುತ್ತದೆ. ತರಪೇತು ದಕ್ಷತೆಯಿಂದ ನಡೆಯುತ್ತದೆ.

## ಉಪಸಂಹಾರ

ಆಧುನಿಕ ಮನಶ್ಶಾಸ್ತ್ರದಲ್ಲಿ ಬುದ್ಧಿಶಕ್ತಿಯ ರಂಗದಲ್ಲಿ ವಿಪುಲವಾದ ಪರಿಶೋಧನೆ ನಡೆದಿರುತ್ತದೆ. ಇನ್ನೂ ನಡೆಯುತ್ತಲಿದೆ. ಬುದ್ಧಿಶಕ್ತಿಯ ಅಳತೆ ಉಪಯೋಗಗಳ ವಿಚಾರವಾಗಿ ಅನೇಕ ಅಂಶಗಳು ಗೊತ್ತಾಗಿವೆ. ಆದರೆ ಬುದ್ಧಿಶಕ್ತಿಯ ನಿಜ ಸ್ವರೂಪ ಏನೆಂಬುದು ಬಿಡಿಸಲಾರದ ಪ್ರಶ್ನೆಯಾಗಿ ನಿಂತಿದೆ. ಹಲವಾರು ವರ್ಷಗಳ ಸತತಪ್ರಯತ್ನದಿಂದ ಈ ಪ್ರಶ್ನೆಯನ್ನು ಬಿಡಿಸಲು ಸಾಧ್ಯವಾಗಬಹುದು. ಬುದ್ಧಿಶಕ್ತಿಯ ಪರೀಕ್ಷೆಗಳಿಂದ ಬುದ್ಧಿಶಕ್ತಿಯ ಮಟ್ಟವನ್ನು ಅಳೆಯಲು ಸಾಧ್ಯವೇ ಹೊರತು, ನಡತೆ, ಭಾವಜೀವನ ಮತ್ತು ವ್ಯಕ್ತಿತ್ವಕ್ಕೆ ಸಂಬಂಧಪಟ್ಟ ಇತರ ವಿಷಯಗಳನ್ನು ಮಾಪನ ಮಾಡಲು ಸಾಧ್ಯವಿಲ್ಲ. ನುರಿತ ಕೆಲವು ಮನೋವೈಜ್ಞಾನಿಕರು ಬುದ್ಧಿಶಕ್ತಿಯ ವೈಯಕ್ತಿಕ ಪರೀಕ್ಷೆಗಳನ್ನು ಕೊಡುವಾಗ ಮಕ್ಕಳ ಭಾವಜೀವನದ ಕೆಲವು ವಿಷಯಗಳನ್ನು ತಿಳಿಯಲು ಸಾಧ್ಯವೆಂದು ಹೇಳುತ್ತಾರೆ. ಅದು ಅನುಭವದ ಮೇಲೆ ಸಾಧ್ಯವಾಗಬಹುದೇ ಹೊರತು, ಬುದ್ಧಿಶಕ್ತಿಯ ಪರೀಕ್ಷೆಗಳಿಂದ ಮಾಪನ ಮಾಡಲು ಸಾಧ್ಯವಿಲ್ಲ.

ನಮ್ಮದೇಶದಲ್ಲಿ ಬುದ್ಧಿಶಕ್ತಿ ಪರೀಕ್ಷೆಗಳನ್ನು ಹೆಚ್ಚಾಗಿ ಉಪಯೋಗಿಸುತ್ತಿಲ್ಲ. ಕೆಲವು ಕೇಂದ್ರಗಳಲ್ಲಿ ಸಂಶೋಧನೆಗಾಗಿ ಉಪಯೋಗಿಸುತ್ತಿದ್ದಾರೆ. ಇನ್ನು ಕೆಲವು ಕ್ಷೇತ್ರಗಳಲ್ಲಿ

ಹುಡುಗರಿಗೆ ಶಿಕ್ಷಣ ಮಾರ್ಗದರ್ಶನ ಕೊಡಲು ಉಪಯೋಗಿಸುತ್ತಿದ್ದಾರೆ. ಒಂದೆರಡು ಮಾನಸಿಕ ಚಿಕಿತ್ಸಾಲಯುಗಳಲ್ಲಿ ಬುದ್ಧಿಶಕ್ತಿ ಪರೀಕ್ಷೆಗಳನ್ನು ಉಪಯೋಗಿಸುತ್ತಿರಬಹುದು. ಹಲವಾರು ಕಾರಣಗಳಿಂದ ಬುದ್ಧಿಶಕ್ತಿಯ ಪರೀಕ್ಷೆಗಳು ನಮ್ಮಲ್ಲಿ ಸಾಕಾದಷ್ಟು ಬಳಕೆಯಲ್ಲಿಲ್ಲ. ಬಹಳ ಮುಖ್ಯವಾದುದೆಂದರೆ, ನಮ್ಮ ಸಂಸ್ಕೃತಿಗೆ ಸರಿಹೋಗುವಂತೆ ಸಮರ್ಪಕವಾದ ಭಾಷಾ ಮತ್ತು ಭಾಷಾರಹಿತ ಪರೀಕ್ಷೆಗಳು ಇಲ್ಲದಿರುವುದಾಗಿದೆ. ಸೈನ್ಯದಲ್ಲಿ ಉಪಯೋಗಿಸುವ ಪರೀಕ್ಷೆಗಳನ್ನು ಹೊರಗಿನವರ ಉಪಯೋಗಕ್ಕೆ ಕೊಡುತ್ತಿಲ್ಲ. ಅವನ್ನು ಬಹಿರಂಗಪಡಿಸಿದರೆ, ಅವುಗಳ ಉಪಯುಕ್ತತೆ ಕಡಮೆಯಾಗುತ್ತದೆ.

ಸ್ವಾತಂತ್ರ್ಯ ಬಂದ ಮೇಲೆ ಜನರ ಜವಾಬ್ದಾರಿ ಹೆಚ್ಚಾಗಿದುತ್ತದೆ. ದೇಶದಲ್ಲಿ ಔದ್ಯೋಗಿಕ ಮತ್ತು ವ್ಯಾವಸಾಯಿಕ ಜೀವನ ಪ್ರಬಲಗೊಳ್ಳಬೇಕಾಗಿದೆ. ಎಲ್ಲಾ ರಂಗಗಳಲ್ಲಿಯೂ ದೇಶದ ಉತ್ಪತ್ತಿ ಅಧಿಕವಾಗಬೇಕಾಗಿದೆ. ಇತರ ದೇಶಗಳ ಮೇಲೆ ಧನ, ದಾನ್ಯ ಮತ್ತು ವಸ್ತುಗಳ ಸರಬರಾಜಿಗಾಗಿ ಪರಾಧೀನರಾಗಿರುವುದು ಕ್ಷೇಮಕರವಲ್ಲ. ಉತ್ಪತ್ತಿಗೆ ಬೇಕಾಗುವ ಭೂ, ಖನಿಜ, ಮಾನವ ಸಂಪತ್ತು ನಮ್ಮಲ್ಲಿ ಬೇಕಾದಷ್ಟಿದೆ. ದೇಶದಲ್ಲಿ ದೊರಕುವ ಈ ಸಂಪತ್ತುಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳುವ ಸಾಮರ್ಥ್ಯ, ದಕ್ಷತೆ ಮತ್ತು ದಿಗ್ದರ್ಶನ ನಮಗೆ ಬೇಕಾಗಿದೆ. ಮಾನವ ಶಕ್ತಿಗಳನ್ನು ಆವಿಷ್ಕಾರ ಮಾಡುವುದರಲ್ಲಿ ಮಾನಸಿಕ ಪರೀಕ್ಷೆಗಳು ಲಾಭದಾಯಕವಾಗಿವೆ. ಬುದ್ಧಿಶಕ್ತಿಯ ಪರೀಕ್ಷೆಗಳಂತೂ ಜನರ ಮೇಧಾಶಕ್ತಿಯ ಮಟ್ಟವನ್ನರಿಯಲು ಅತ್ಯಂತ ಸಹಾಯಕಾರಿಗಳಾ

ಗಿರುತ್ತವೆ. ದೇಶದ ಜನರು ಇವುಗಳ ಉಪಯುಕ್ತತೆಯನ್ನರಿತು ತಮ್ಮ ಶ್ರೇಯೋಭಿವೃದ್ಧಿಗೆ ಅವುಗಳನ್ನು ಅಧಿಕವಾಗಿ ಉಪಯೋಗಿಸುವರೆಂದು ಹಾರೈಸೋಣ.

## ಗ್ರಂಥ ಋಣ

1. Anastasi and Foley–Differential Psychology–Macmillan 1953.
2. Bhatia C.M. —Intelligence testing and National reconstruction. Hind kitabs—Bombay 1949.
3. ,, —Performance tests of Intelligence under Indian conditions–Oxford University Press, 1955.
4. Cronback —Essentials of Psychologycal testing — Harper, 1949.
5. Eysenck H.J. —Uses and abuses of Psychology — Pelican 1955.
6. Good enough —Mental testing, — Rinehart, 1954.
7. Pintner —Intelligence testing–Yonkers, 1930.

8. Rex Knight —Intelligence and Intelligence Tests—Methuen, 1950.

9. Tyler —Human differences, Appleton—century crofts, 1947.

10. Wechsler, D. —Measurement of Adult Intelligence— Williams and Wilkins, Baltimore, 1952.

11. ಕುಪ್ಪುಸ್ವಾಮಿ, ಬಿ. —ಮಕ್ಕಳ ಮನಸ್ಸು 1950.

12. ,, —ಶಿಕ್ಷಣ ಮನೋವಿಜ್ಞಾನ 1949.

# ತಿದ್ದುಪಡಿ

| ಪುಟ | ಪಂಙ್ತಿ | ತಪ್ಪು | ಒಪ್ಪು |
|---|---|---|---|
| ೭ | ೨ | Education | Eduction |
| ೭ | ೧೦ | Education | Eduction |
| ೭ | ೧೧ | Comelates | Correlates |
| ೮ | ೩ | Intelegence | Intelligence |
| ೮ | ೫ | ಫ್ಯಾಕ್ಟರ್ | ಫ಼್ಯಾಕ್ಟರ್ |
| ೮ | ೧೫ | ಸಂಯೋಜನೆಯಿಂದ | ಸಂಯೋಜನೆಯಿಂದ. |
| ೯ | ೫ | ಗಾಡ್‌ಫ್ರೋಥಾಂಪ್ಸನ್ | ಗಾಡ್‌ಫ಼್ರೀ ಥಾಂಪ್ಸನ್ |
| ೧೪ | ೧೩ | ಟರ್ಬನ್ | ಟರ್ಮನ್ |
| ೧೪ | ೧೪ | ಜರ್ಮನ್ | ಟರ್ಮನ್ |
| ೧೪ | ೨೩ | ಟರ್ಮಾನ್ | ಟರ್ಮನ್ |
| ೧೫ | ೪ | ಸ್ಪಿರ್ | ಸ್ಟರ್ನ್ |
| ೧೫ | ೫ | Intelegence | Intelligence |
| ೧೫ | ೬ | ಟರ್ಮನ್ | ಟರ್ಮನ್ |
| ೧೫ | ೮ | ಬೀನೆನ್ | ಬೀನೆ |
| ೧೫ | ೨೧ | ಟರ್ಮನ್ | ಟರ್ಮನ್ |
| ೧೫ | ೧೮ | ಸೂಚಿಸುತ್ತಡೋ. | ಸೂಚಿಸುತ್ತದೋ |
| ೧೫ | ೧೪ | ಟರ್ಮನ್ | ಟರ್ಮನ್ |
| ೧೬ | ೧೯ | ಪರೀಕ್ಷೆಗಳನ್ನೂ | ಪರೀಕ್ಷೆಗಳನ್ನು |
| ೧೬ | ೧೯ | ಯರ್ಕಿನ್ | ಯರ್ಕಿಸ್ |
| ೧೭ | ೧೭ | ಥರ್ಸ್ಟನ್‌ನಾಕ್ಸ್ | ಥರ್ಸ್ಟನ್, ನಾಕ್ಸ್, |
| ೧೭ | ೧೮ | ರೇಮಂಡ್‌ಬಿ,ಕ್ಯಟೇರ್. | ರೇಮಂಡ್ ಬಿ. ಕ್ಯಟೇಲ್. |
| ೧೭ | ೧೯ | ಡೇವಿಡ್, ಚಿ ವೆಕ್ಸ್ಲರ್ | ಡೇವಿಡ್ ಬಿ. ವೆಕ್ಸ್ಲರ್ |
| ೧೭ | ೨೩ | ಸಿರಿಲ್ ಬರ್ಪ್ | ಸಿರಿಲ್ ಬರ್ಟ್ |
| ೧೮ | ೫ | ಪರೀಕ್ಷೆಯನ್ನೂ | ಪರೀಕ್ಷೆಯನ್ನು |

| ಪುಟ | ಪಂಙ್ತಿ | ತಪ್ಪು | ಒಪ್ಪು |
|---|---|---|---|
| ೧೮ | ೧೬ | ಬುದ್ಧಿಶಕ್ತಿಯನ್ನೂ | ಬುದ್ಧಿಶಕ್ತಿಯನ್ನು |
| ೧೮ | ೨೦ | ಉತ್ತರನ | ಉತ್ತರದ |
| ೧೯ | ೫ | ಬುದ್ಧಿ ಶಕ್ತಿ | ಬುದ್ಧಿಶಕ್ತಿ |
| ೧೯ | ೬ | ಪರೀಕ್ಷೆಯನ್ನೂ | ಪರೀಕ್ಷೆಯನ್ನು |
| ೧೯ | ೧೫ | ಉಪಯೋಸಬಹುದು | ಉಪಯೋಗಿಸಬಹುದು. |
| ೨೧ | ೧೨ | ಮೋಕ್ಸಿನ್ | ಮೋಸಿನ್ |
| ೨೧ | ೧೭ | ಪರೀಕ್ಷೆಗಳನ್ನೂ | ಪರೀಕ್ಷೆಗಳನ್ನು |
| ೩೮ | ೩ | ಉತ್ತರಗಳನ್ನು | ಉತ್ತರಗಳಿಗೆ |
| ೪೫ | ೨೩ | ದೇಶದ | ದೇಹದ |
| ೪೮ | ೪ | ಜೋನ್ ಕಾನ್ರಾಡ್ | ಜೋನ್ಸ್ ಕಾನ್ರಾಡ್ |
| ೫೦ | ೧೪ | ಇದಿರಿಸುವುದು | ಇರಿಸುವುದು |
| ೫೩ | ೭ | ಇನ್ನು | ಇನ್ನೂ |
| ೫೪ | ೧ | ತೋರಿಸುತ್ತವೆ | ತೋರಿಸುತ್ತದೆ. |
| ೭೭ | ೨೩ | ಬುದ್ದಿಯ | ಬುದ್ಧಿಯ |
| ೮೫ | ೧೧ | ಒಬ್ಬನು | ಒಬ್ಬನ |
| ೮೬ | ೪ | ಕೆಲಗಾರರಿಗೂ | ಕೆಲಸಗಾರರಿಗೂ |

# ಸರ್ ಕೆ. ಪಿ. ಪುಟ್ಟಣ್ಣ ಚೆಟ್ಟರ ಪುದುವಟ್ಟಿನ ಪ್ರಕಟನಮಾಲೆ

೧. ಟಪಾಲ್ ಸಂಸ್ಥೆಯ ವಿವರ—ಕೆ. ಲಕ್ಷ್ಮೀನರಸಿಂಹಯ್ಯ, ಬಿ.ಎ., ಎಲ್‌ಎಲ್.ಬಿ.

೨. ವಿಶ್ವವಿಸರಣ—ಜಿ. ಎಸ್. ಪರಮಶಿವಯ್ಯ, ಎಂ.ಎಸ್‌ಸಿ.

೩. ಸರ್ಕಾರದ ಪದ್ಧತಿ ಮತ್ತು ರಚನಾಕ್ರಮ—ಎಚ್. ಕೃಷ್ಣರಾವ್, ಎಂ.ಎ.

೪. ವ್ಯವಸಾಯದ ಮಣ್ಣುಗಳು—ಕೂರಪಾಡು ಗುಂಡಪ್ಪ, ಬಿ.ಎ.

೫. *ಆಕಾಶಯಾನ—ಬಿ. ಕೆ. ರ್ವಿ. ರಾವ್

೬. *ವಿಶ್ವವಿದ್ಯಾನಿಲಯಗಳು—ಡಾ|| ಎಂ. ಸಿದ್ದಲಿಂಗಯ್ಯ, ಎಂ.ಎ., ಬಿ.ಟಿ., ಪಿಎಚ್‌ಡಿ., ಡಿಪ್.ಎಡ್. ಮತ್ತು ಸಿ. ರಂಗಾಚಾರ್, ಬಿ.ಎಸ್‌ಸಿ., ಎಂ.ಎಡ್.

೭. *ಹೆರಿಗೆ ಮತ್ತು ಶಿಶುಪೋಷಣೆ—ಡಾ|| ರತ್ನಮ್ಮ ಐಸಾಕ್, ಎಲ್.ಎಂ.ಎಸ್., ಎಂ.ಆರ್.ಸಿ.ಎಸ್., ಎಲ್.ಆರ್.ಸಿ.ಪಿ.

೮. ಮಲೇರಿಯಾ ನಿರೋಧ—ಬಿ. ಅನಂತಸ್ವಾಮಿರಾವ್, ಬಿ.ಎಸ್‌ಸಿ., ಎಂ.ಬಿ., ಬಿ.ಎಸ್., ಎಂ.ಪಿ.ಎಚ್.

೯. ಗ್ರಾಮ ನೈರ್ಮಲ್ಯ—ಎಸ್. ಡಿ. ನಾರಾಯಣಗೌಡ, ಎಂ.ಬಿ., ಬಿ.ಎಸ್., ಡಿ.ಪಿ.ಎಚ್.

೧೦. ಪಶುಪಾಲನೆ—ಎಂ. ಕೃಷ್ಣಶಾಸ್ತ್ರಿ, ಬಿ.ಎ., ಐ.ಡಿ.ಡಿ., ಅಸೋಸಿಯೇಟ್ ಐ.ಡಿ.ಆರ್.ಐ.

೧೧. ಯೋಗಾಸನಗಳು—ವಿದ್ವಾನ್ ಟಿ. ಕೃಷ್ಣಮಾಚಾರ್ಯ
ಬೆಲೆ : ಸಾದಾ ೮೦ ನ.ಪೈ ; ಉತ್ತಮ ರೂ. ೧

೧೨. ಮೈಸೂರು ದೇಶದ ರಸಾಯನಿಕ ಕೈಗಾರಿಕೆಗಳು —ಕೆ. ಅಶ್ವತ್ಥನಾರಾಯಣರಾವ್, ಡಿ.ಎಸ್‌ಸಿ.

೧೩. ವಿದ್ಯುಚ್ಛಕ್ತಿಯ ಉಪಯೋಗ—ಎಂ. ಬಿ. ತಿರುನಾರಾಯಣ, ಬಿ.ಎ., ಬಿ.ಎಸ್‌ಸಿ. (ಆನರ್ಸ್, ಇ.ಇ.) ಸಿ.ಪಿ., ಇ.ಟಿ. (ಐ.ಐ.ಎಸ್.)

೧೪. ಮಕ್ಕಳ ಬೆಳವಣಿಗೆ—ಡಾ॥ ಬಿ. ಕುಪ್ಪುಸ್ವಾಮಿನಾಯಿಡು, ಎಂ.ಎ., ಡಿ.ಲಿಟ್.

೧೫. ರೇಡಾರ್—ಆರ್. ಎಲ್. ನರಸಿಂಹಯ್ಯ, ಎಂ.ಎಸ್‌ಸಿ.
ಬೆಲೆ : ಸಾದಾ ೬೦ ನಯೆ ಪೈಸೆ; ಉತ್ತಮ ರೂ. ೧.

೧೬. ಗಣಿ ಕೆಲಸದ ಕೈಪಿಡಿ—ಜೆ. ಪಿ. ಡೇವಿಡ್, ಬಿ.ಎಸ್‌ಸಿ.;
ಬೆಲೆ: ಸಾದಾ ೬೦ ನಯೆ ಪೈಸೆ; ಉತ್ತಮ ರೂ. ೧.

೧೭. ಲೋಹವಿದ್ಯೆ—ಡಾ॥ ಬಿ. ಪಿ. ರಾಧಾಕೃಷ್ಣ. ಎಂ.ಎಸ್‌ಸಿ., ಪಿಎಚ್.ಡಿ.

೧೮. ಪರಮಾಣುಶಕ್ತಿ—ಡಾ॥ ಎಲ್. ಸೀಬಯ್ಯ, ಡಿ.ಎಸ್‌ಸಿ.

೧೯. ಭಾರತ ಸಂವಿಧಾನ—ಗ.ಸ. ಹಾಲಪ್ಪ, ಎಂ.ಎ. (ಕೊಲಂಬಿಯ)

೨೦. ಅಂತರ ರಾಷ್ಟ್ರೀಯ ಸಂಬಂಧಗಳು —ಟಿ. ಎಸ್. ನಾರಾಯಣರಾವ್, ಎಂ.ಎ.

೨೧. ವಿಕಿರಣಕ್ರಿಯಾಶಕ್ತಿ—ಕೆ. ಶೇಷಾದ್ರಿ ಅಯ್ಯಂಗಾರ್, ಎಂ.ಎಸ್ ಸಿ., ಎಲ್ಎಲ್.ಬಿ.

೨೨-೨೩. ಸಂಸಾರ ಯೋಜನೆ—ಡಾ॥ ಎಂ. ದಯಾಕರ, ಎಂ.ಬಿ., ಬಿ.ಎಸ್.

೨೪. ಜಲಶಕ್ತಿ—ಎಚ್. ಸಿ. ಕಪನೀಪತಿಭಟ್ಟ, ಬಿ.ಎ., ಬಿ.ಇ., ಎಂ.ಐ.ಇ.

೨೫. ಪತ್ರಿಕೋದ್ಯಮಶಾಸ್ತ್ರ—ನಾಡಿಗ ಕೃಷ್ಣಮೂರ್ತಿ, ಎಂ.ಎ. (ಮಿಸ್ಸೋರಿ).

೨೬. ಮುದ್ರಣ ಕಲೆ—ಡಿ. ಎಸ್. ಗುರುಬಸಪ್ಪ, ಬಿ.ಎಸ್‌ಸಿ., ಮತ್ತು ಬಿ. ಪಿ. ಮಲ್ಲರಾಜೆ ಅರಸು, ಬಿ.ಎ., ಎಲ್ಎಲ್.ಬಿ.

೨೭. ಬುದ್ಧಿಶಕ್ತಿಯ ಅಳತೆ ಮತ್ತು ಅದರ ಪ್ರಯೋಜನಗಳು — ಬಿ. ಕೃಷ್ಣ, ಎಂ.ಎ.

ಬೆಲೆ : ಸಾದಾ ೪೦ ನಯೆ ಪೈಸೆ; ಉತ್ತಮ ೫೦ ನಯೆ ಪೈಸೆ.




---

* ಈ ಪುಸ್ತಕಗಳು ಮುಗಿದುಹೋಗಿವೆ.